# ಬಾಚಿಕಾಯಕದ ಬಸವಯ್ಯನ ವಚನಗಳ ತಾತ್ವಿಕ ಸ್ವರೂಪ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ)


ಸಂಶೋಧಕರು

ಸುರೇಶ ವೈ.

ನೋಂ ಸಂಖ್ಯೆ : ೧೯೦೧೧೦೫೦೩೦೦೧೯



ಮಾರ್ಗದರ್ಶಕರು

ಡಾ. ವೀರೇಶ ಬಡಿಗೇರ

ಪ್ರಾಧ್ಯಾಪಕರು

ಹಸ್ತಪ್ರತಿಶಾಸ್ತ್ರ ವಿಭಾಗ





ಭಾಷಾ ನಿಕಾಯ

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೧೯-೧೨

# ಬಾಚಿಕಾಯಕದ ಬಸವಯ್ಯನ ವಚನಗಳ ತಾತ್ವಿಕ ಸ್ವರೂಪ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ)



ಸಂಶೋಧಕರು
**ಸುರೇಶ ವೈ.**
**ನೋಂದಣಿ ಸಂಖ್ಯೆ: ೧೬೦೧೦೫೦೩೦೦೧೯**

ಮಾರ್ಗದರ್ಶಕರು
**ಡಾ. ವೀರೇಶ ಬಡಿಗೇರ**
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ



**ಹಸ್ತಪ್ರತಿಶಾಸ್ತ್ರ ವಿಭಾಗ**
ಭಾಷಾ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ-೫೮೩ ೨೭೬
೨೦೧೬-೧೭

# ಬಾಚಿಕಾಯಕದ ಬಸವಯ್ಯನ ವಚನಗಳ ತಾತ್ವಿಕ ಸ್ವರೂಪ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ)



ಸಂಶೋಧಕರು
**ಸುರೇಶ ವೈ.**
**ನೋಂದಣಿ ಸಂಖ್ಯೆ: ೧೬೦೧೦೫೦೩೦೦೯**

ಮಾರ್ಗದರ್ಶಕರು
**ಡಾ. ವೀರೇಶ ಬಡಿಗೇರ**
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ



**ಹಸ್ತಪ್ರತಿಶಾಸ್ತ್ರ ವಿಭಾಗ**
ಭಾಷಾ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ–೫೮೩ ೨೭೬
೨೦೧೬–೧೭

# ಮಾರ್ಗದರ್ಶಕರ ದೃಢೀಕರಣ ಪತ್ರ

**ಸುರೇಶ ವೈ.** ಅವರು ನನ್ನ ಮಾರ್ಗದರ್ಶನದಲ್ಲಿ **"ಬಾಚಿಕಾಯಕದ ಬಸವಯ್ಯನ ವಚನಗಳ ತಾತ್ವಿಕ ಸ್ವರೂಪ"** ಎಂಬ ಸಂಶೋಧನಾ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಿದ್ಧಪಡಿಸಿರುತ್ತಾರೆ.

ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ. ವೀರೇಶ ಬಡಿಗೇರ**
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ದಿನಾಂಕ :

ಸ್ಥಳ : ವಿದ್ಯಾರಣ್ಯ

# ಸಂಶೋಧಕರ ಘೋಷಣಾ ಪತ್ರ

ಡಾ. ವೀರೇಶ ಬಡಿಗೇರ, ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ **"ಬಾಚಿಕಾಯಕದ ಬಸವಯ್ಯನ ವಚನಗಳ ತಾತ್ವಿಕ ಸ್ವರೂಪ"** ಎಂಬ ಸಂಶೋಧನಾ ಸಂಪ್ರಬಂಧವನ್ನು ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಾದರಪಡಿಸುತ್ತಿದ್ದೇನೆ.

ಈ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಣೆಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನಾ ಅಧ್ಯಯನವಾಗಿದೆ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಂಶೋಧಕರು

Suresh. Y

**ಸುರೇಶ ವೈ.**
ಎಂ.ಫಿಲ್. ಸಂಶೋಧನಾ ವಿದ್ಯಾರ್ಥಿ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

ದಿನಾಂಕ : ೨೭-೦೨-೨೦೦೨

ಸ್ಥಳ : ವಿದ್ಯಾರಣ್ಯ

## ಪರಿವಿಡಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

೧.೧. ಪ್ರಸ್ತಾವನೆ

೧.೨. ಉದ್ದೇಶ

೧.೩. ವ್ಯಾಪ್ತಿ

೧.೪. ಸ್ವರೂಪ

# ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

## ಪ್ರಸ್ತಾವನೆ

ಕರ್ನಾಟಕದ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನವು ಅತಿ ಪ್ರಮುಖ ಕಾಲವಾಗಿ ಪರಿಗಣಿತಗೊಂಡಿದೆ. ಅಪೇಕ್ಷಣೀಯವಲ್ಲದ ಸ್ಥಿತಿಯಲ್ಲಿದ್ದ ಸಮಾಜವನ್ನು ವ್ಯವಸ್ಥಿತ ರೀತಿಯಲ್ಲಿ ಸುಸ್ಥಿತಿಗೆ ತರಲು ನಡೆಸಿದ ಪ್ರಯತ್ನದ ಕಾಲವದು. ಅದುವೆ ವಚನ ಚಳುವಳಿಯ ಕಾಲ.

ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಹಾಗೂ ಭಾಷಾ ನೆಲೆಗಳಲ್ಲಿ ತಮ್ಮದೇ ಆದಂತಹ ಹೊಸ ಛಾಪನ್ನು ಮೂಡಿಸುವ, ಮಾನವ ಕುಲವನ್ನು ಸಮಾನತೆ ಎನ್ನುವ ಚೌಕಟ್ಟಿಗೆ ಒಳಪಡಿಸುವ ಸಮಾಜವನ್ನು ಸರ್ವಾಂಗ ಸುಂದರವನ್ನಾಗಿಸುವ ಹೆಬ್ಬಯಕೆಯಿಂದ ಕ್ರಿಯಾಶೀಲರಾದವರು ವಚನಕಾರರು. ಈ ಕಾರ್ಯದಲ್ಲಿ ಅಸಂಖ್ಯಾತ ಶರಣರು ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡು ಸರ್ವಸಮಾನತೆಯ ಸ್ವಚ್ಚ ಸುಂದರ ಸಮಾಜ ನಿರ್ಮಾಣ ಮಾಡುವಲ್ಲಿ ಮುಂದಾದರು. ಬಸವಣ್ಣ, ಅಲ್ಲಮಪ್ರಭು, ಚೆನ್ನಬಸವಣ್ಣ, ಸಿದ್ಧರಾಮಣ್ಣ, ಅಕ್ಕಮಹಾದೇವಿ ಮುಂತಾದ ಪ್ರಮುಖರ ಮಾರ್ಗದರ್ಶನದಲ್ಲಿ ವೈಚಾರಿಕ ನೆಲೆಯ ಆಧಾರದಲ್ಲಿ ಇವರ ಕಾರ್ಯ ಮಾರ್ಗಗಳು ರೂಪುಗೊಂಡವು.

ಕೊಂಡಗುಳಿ ಕೇಶಿರಾಜ, ಜೇಡರದಾಸಿಮಯ್ಯ, ಸಕಲೇಶ ಮಾದರಸ, ಕೆಂಬಾವಿ ಬೋಗಣ್ಣ, ಡೋಹರ ಕಕ್ಕಯ್ಯ, ಮಾದರ ಚೆನ್ನಯ್ಯ ಮುಂತಾದವರು ಬಸವಣ್ಣನವರ ಹಿರಿಯ ಸಮಕಾಲೀನರಾಗಿದ್ದರು. ಹಾವಿನ ಹಾಳ ಕಲ್ಲಯ್ಯ, ಮೆರೆಮಿಂಡದೇವ, ಏಕೋರಾಮ, ತೆಲುಗ ಬೊಮ್ಮಯ್ಯ, ಬಾಹೂರ ಬೊಮ್ಮಯ್ಯ ಮುಂತಾದ ಶರಣರು ಬಸವಣ್ಣನಿಗೆ ಪೂರ್ವದಲ್ಲಿಯೇ ಇದ್ದರು. ಇವರಲ್ಲಿ ಕೆಲವರು ಸಮಾಜ ಸುಧಾರಣೆಯ ದಿಶೆಯಲ್ಲಿ ಕಾರ್ಯವನ್ನು ಆರಂಭಿಸಿ ಅಸಮಾನತೆಯ ವಿರುದ್ಧ ತಮ್ಮ ದನಿಯನ್ನು ಎತ್ತಿದ್ದರು. ಅವರಲ್ಲಿ ಬಾಚಿಕಾಯಕದ ಬಸವಯ್ಯ ಒಬ್ಬರು. ಇವರು ಸಾಮಾಜಿಕ ಪ್ರಜ್ಞೆಯುಳ್ಳ ನೀತಿಬೋಧಕರು ಸಮಾಜ ವಿಮರ್ಶಕರು ಸಮಾನ ಮನೋಧರ್ಮಿಗಳು ಆಗಿದ್ದರು. ಇವರೆಲ್ಲರು ಒಂದೆಡೆ ಸೇರಿ ಚರ್ಚೆ ನಡೆಸಿ ತಮ್ಮ ಅನುಭವಗಳನ್ನು ಪರಸ್ಪರ ಹೋಲಿಸಿಕೊಳ್ಳುತ್ತಿದ್ದರು. ಹೀಗಾಗಿ ವಚನಕಾರರ ಕೈಂಕರ್ಯಕ್ಕೆ ಈ ಮೇಲ್ಕಂಡ ಮಹನೀಯರು ಒಂದು ವಿಧದಲ್ಲಿ ಬೀಜಾರ್ಪಣೆ ಮಾಡಿದ್ದರು. ಇವರ ಈ

ಪೂರ್ವಕಲ್ಪನೆ ಪೂರ್ವ ಸಿದ್ಧತೆ, ಬಸವಣ್ಣ ಮೊದಲಾದವರಿಗೆ ಉತ್ತಮ ಸಮಾಜವನ್ನು ನಿರ್ಮಿಸುವಲ್ಲಿ ಸಹಾಯಕವಾಯಿತು. ಜೇಡರ ದಾಸಿಮಯ್ಯ ತನ್ನ ವಚನಗಳಲ್ಲಿ ನಿಮ್ಮ ಶರಣರ "ಸೂಳ್ನುಡಿಯು ಒಂದರೆ ಘಳಿಗೆಯಿತ್ತಡೆ ನಿಮ್ಮ ನಿತ್ತೆ ಕಾಣಾ ರಾಮಾನಾಥ" ಎಂದು ಹಾಗೂ "ಕಡುದರ್ಪವೇರಿದ ಒಡಲೆಂಬ ಬಂಡಿಗೆ ಮೃಢ ಭಕ್ತರ ನುಡಿಗಡಣವೆ ಕಡೆಗೀಲು ಕಾಣಾ ರಾಮಾನಾಥ" ಎಂದು ಹೇಳಿ ಹಿಂದೆ ಸೂಳ್ನುಡಿ ಭಕ್ತಿ ನುಡಿಗಡಣಗಳನ್ನು ಹೇಳುವ ಕೇಳುವ ಪರಿಪಾಠವಿತ್ತೆಂದು ಸೂಚಿಸಿದ್ದಾನೆ. ಆದರೆ ಜೇಡರ ದಾಸಿಮಯ್ಯಗಿಂತಲೂ ಭಿನ್ನವಾಗಿ ಬಾಚಿಕಾಯಕದ ಬಸವಯ್ಯ ತನ್ನ ವಚನಗಳಲ್ಲಿ ವೃತ್ತಿ ಜೀವನವನ್ನು ಕುರಿತು ವಿವರಿಸಿದ್ದಾನೆ. ಆ ವೃತ್ತಿಯು ಜೀವನದ ನೆಲೆ ಸಾಮಾಜಿಕ ಸುಧಾರಣೆ ಹಾಗೂ ವೃತ್ತಿಯಲ್ಲಿರುವಂತಹ ತಾರತಮ್ಯ ಭಾವನೆ. ಇಂತಹ ವೈಚಾರಿಕ ನಿಲುವುಗಳನ್ನು ಈ ಆಧ್ಯಾಯದಲ್ಲಿ ಹೇಳಲಾಗಿದೆ.

## ೧.೧ ಅಧ್ಯಯನದ ಉದ್ದೇಶ

ಹನ್ನೆರಡನೆಯ ಶತಮಾನದ ವಚನ ಸಾಹಿತ್ಯದಲ್ಲಿ ಬಸವಣ್ಣ, ಅಲ್ಲಮಪ್ರಭು, ಜೇಡರ ದಾಸಿಮಯ್ಯ, ಚೆನ್ನಬಸವಣ್ಣ, ಅಂಬಿಗರ ಚೌಡಯ್ಯ, ಮಾದಾರ ಚೆನ್ನಯ್ಯ, ಹಾವಿನ ಹಾಳ ಕಲ್ಲಯ್ಯ, ಕಾಮಾಟದ ಭೀಮಣ್ಣ ಇವರಂತೆ ಬಾಚಿಕಾಯಕದ ಬಸವಣ್ಣ ವಚನಗಳನ್ನು ರಚಿಸಿದ್ದಾರೆ.

ವೃತ್ತಿಯಲ್ಲಿ ಬಡಿಗತನ ಪ್ರವೃತ್ತಿಯಲ್ಲಿ ವಚನ ಸಾಹಿತ್ಯದ ಕಡೆಗೆ ಗಮನ ಹರಿಸಿದನು.

ಹನ್ನೆರಡನೆಯ ಶತಮಾನದ ವಚನ ಸಾಹಿತ್ಯದ ಕಡೆಗೆ ಹೆಚ್ಚು ಒಲವು ತೋರಿ ತನ್ನ ಕಾಯಕದ ಕ್ರಾಂತಿಯ ಕಿಡಿಯಾಗಿ ಚಳುವಳಿಯಲ್ಲಿ ದುಮುಕಿದನು. ಚಳುವಳಿಯ ನಂತರ ವಚನ ಸಾಹಿತ್ಯದ ಮೂಲಕ ಸಾಹಿತ್ಯದ ಏಳಿಗೆಗಾಗಿ ಸಮಾಜದ ಉದ್ಧಾರಕ್ಕಾಗಿ ದುಡಿದನು.

ಇಂತಹ ಸಾಧನೆಯ ಹಾದಿಯಲ್ಲಿ ಬೆಳೆದ ಬಾಚಿಕಾಯಕದ ಬಸವಯ್ಯನ ವೃತ್ತಿ ಮತ್ತು ತತ್ವ ಮೀಮಾಂಸೆಯನ್ನು ಅಭ್ಯಸಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಬಾಚಿಕಾಯಕದ ಬಸವಯ್ಯನಲ್ಲಿರುವ ಸಾಮಾಜಿಕ ಮೌಲ್ಯ ವೃತ್ತಿಯ ವೈಶಿಷ್ಟ್ಯತೆ ತುಳಿತಕ್ಕೊಳಗಾದವರ ಆಕ್ರೋಶ ಮುಂತಾದ ವಿಚಾರಗಳನ್ನು ಅಧ್ಯಯಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಬಾಚಿಕಾಯಕದ ಬಸವಯ್ಯ ಕಾಯಕ ಯೋಗಿಯಾಗಿ ಲೌಖಿಕದ ಜೀವನವನ್ನು ತ್ಯಜಿಸದೆ ನೇಮಶೀಲಗಳನ್ನು ಸಾಧನೆಯ ಮೆಟ್ಟಿಲನ್ನಾಗಿಸಿಕೊಂಡ ತಾತ್ವಿಕ ಮನೋಭಾವನೆ ಉಳ್ಳವನು, ಕಾಯಕ ಮಾಡುವ ವಸ್ತು ಸಾಮಾಗ್ರಿಗಳಾದ ಉಳಿ, ಬಾಚಿ, ಕೊಡತಿ, ಏಣು, ಕಂಬ, ಚೌಷಪ್ಪಿ ಬೋದಿಗೆ, ಮಡಿಗೆ ಮುಂತಾದವುಗಳನ್ನು ಬಳಕೆ ಮಾಡಿ ವಚನಗಳನ್ನು ರಚಿಸಿದ್ದಾನೆ. ಇವುಗಳ ತಾತ್ವಿಕತೆಯನ್ನು ಹೇಳುವುದು ಈ ಅಧ್ಯಯನದ ಉದ್ದೇಶವಾಗಿದೆ.

ಹನ್ನೆರಡನೇಯ ಶತಮಾನದಲ್ಲಿರುವ ಜಾತಿ–ಭೇದ, ವರ್ಗ–ಭಾವ, ನೀತಿ–ನಿಯಮಗಳನ್ನು ಧಿಕ್ಕರಿಸಿ ಸಮಾಜದ ಉದ್ಧಾರಕ್ಕಾಗಿ ದುಡಿದನು.

ಬಾಚಿಕಾಯಕದ ಬಸವಯ್ಯನವರು ವಚನಗಳನ್ನು ಬರೆದಿರುವುದು ಬೆಳಕಿಗೆ ಬಂದಿದ್ದು ಅವರನ್ನು ಕುರಿತು ನಿರ್ಧಿಷ್ಟವಾಗಿ ಯಾರು ಸಮಗ್ರವಾಗಿ ಅಧ್ಯಯನಕ್ಕೆ ಒಳಪಡಿಸಿರಲಿಲ್ಲ. ಆದುದರಿಂದ ಇವರ ತಾತ್ವಿಕ ವಿಮೋಚನೆಯನ್ನು ಹೇಳುವ ಉದ್ದೇಶ ಅಧ್ಯಯನಕ್ಕಿದೆ.

**೧.೨. ಅಧ್ಯಯನದ ವ್ಯಾಪ್ತಿ**

ಪ್ರಸ್ತುತ ಅಧ್ಯಯನದ ವ್ಯಾಪ್ತಿಯು 'ಬಾಚಿಕಾಯಕದ ಬಸವಯ್ಯನ ವಚನಗಳ ತಾತ್ವಿಕ ಸ್ವರೂಪ' ಎಂಬ ವಿಷಯಕ್ಕೆ ಮಾತ್ರ ಸಂಬಂಧಿಸಿದಂತೆ ಬಾಚಿಕಾಯಕದ ಬಸವಯ್ಯ ಹಾಗೂ ಅವರ ವಚನಗಳನ್ನು ಕುರಿತಾಗಿ ಪ್ರಸ್ತುತ ಅಧ್ಯಯನವನ್ನು ಸೀಮಿತಗೊಳಿಸಿದ್ದೇನೆ. ಅಷ್ಟೇ ಅಲ್ಲದೆ ಬಾಚಿಕಾಯಕದ ಬಸವಯ್ಯನ ಸಮಕಾಲೀನ ವಚನಕಾರರನ್ನು ಈ ಅಧ್ಯಯನದ ಆಂಶಿಕ ವ್ಯಾಪ್ತಿಗೆ ಒಳಪಡಿಸಿದ್ದೇನೆ.

**೧.೩. ಅಧ್ಯಯನದ ಸ್ವರೂಪ**

ಇದೊಂದು ವಿಶ್ಲೇಷಣಾತ್ಮಕ ಅಧ್ಯಯನವಾಗಿದೆ. ಪ್ರಮುಖವಾಗಿ ಬಾಚಿಕಾಯಕದ ಬಸವಯ್ಯನ ವಚನಗಳ ತಾತ್ವಿಕ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಸಂಶೋಧನಾ ಪ್ರಬಂಧವನ್ನು ಐದು ಅಧ್ಯಯನಗಳಾಗಿ ವಿಂಗಡಿಸಲಾಗಿದೆ.

ಹನ್ನೆರಡನೇಯ ಶತಮಾನವು ಜಾತಿ–ವರ್ಗ ಸಂಘರ್ಷ ಧರ್ಮ ವ್ಯವಸ್ಥೆಗಳಿಂದ ತುಂಬಿ ತುಳುಕುತ್ತಿತ್ತು. ಅದರ ಜೊತೆಗೆ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಈ ಮೂರು ವರ್ಣಗಳು ಅಹಂನಿಂದ ಶೂದ್ರ ವರ್ಗವನ್ನು ಶೋಷಣೆ ಮಾಡುತ್ತಿದ್ದವು. ಈ ವ್ಯವಸ್ಥೆಯನ್ನು ಅಳಿಸುವುದಕ್ಕಾಗಿ ತನ್ನ ಕಾಯಕದ ಜೊತೆ ಜೊತೆಗೆ ವಚನಗಳನ್ನು ರಚಿಸಿದನು. ಸರಳ ಸುಲಲಿತವಾಗಿ ಜನರು ಅರ್ಥೈಸಿಕೊಳ್ಳುವ ರೀತಿಯಲ್ಲಿ ರಚಿಸಿದನು. ಸಮಾಜದ ಶೋಷಣೆಯನ್ನು ಹೋಗಲಾಡಿಸುವ ಶಕ್ತಿಯನ್ನು ಬಳಸಿಕೊಂಡನು.

ಆ ಚಳುವಳಿಯಲ್ಲಿ ಭಾಗವಹಿಸಿದ ಬಾಚಿಕಾಯಕದ ಬಸವಯ್ಯನು ಇಡೀ ಸಮಾಜಕ್ಕೆ ತನ್ನ ಹೆಸರು ಚಿರಾಯುವಾಗಿ ಉಳಿಯಿತು. ಇಂತಹ ಕಾಯಕ ಯೋಗಿಯ ತಾತ್ವಿಕ ನಿಲುವನ್ನು ಒಂದನೆ ಅಧ್ಯಾಯದಲ್ಲಿ ತಿಳಿಸಲಾಗಿದೆ.

ಎರಡನೇಯ ಅಧ್ಯಾಯದಲ್ಲಿ ಬಾಚಿಕಾಯಕದ ಬಸವಯ್ಯನ ವೃತ್ತಿ ಸಂವೇದನೆ ಮತ್ತು ಅವನ ಕುಲಕಸುಬು ನೆಲೆ ತಾತ್ವಿಕ ಜಿಜ್ಞಾಸೆಗಳನ್ನು ವಿವರಿಸಲಾಗಿದೆ. ಸಂಪ್ರದಾಯಿಕ ಮೌಲ್ಯಗಳನ್ನು ವೈಚಾರಿಕತೆ ಮೂಲಕ ಪ್ರಶ್ನಿಸಿದನು. ಶೋಷಿತ ಸಾಮಾಜಿಕ ಅವ್ಯವಸ್ಥೆಯಿಂದ ಮೇಲೆದ್ದು ಶ್ರಮಿಕ ವರ್ಗದವನಾಗಿ ಬೆಳೆದನು ಎಂಬ ತಾತ್ವಿಕತೆಯನ್ನು ಈ ಅಧ್ಯಾಯದಲ್ಲಿ ಹೇಳಲಾಗಿದೆ.

ಮೂರನೇಯ ಅಧ್ಯಾಯದಲ್ಲಿ ಶರಣರ ಸಾಂಸ್ಕೃತಿಕ ಬದುಕಿನ ರಾಜಕೀಯದ ಅವ್ಯವಸ್ಥೆಯನ್ನು ಈ ಅಧ್ಯಾಯದಲ್ಲಿ ಅನಾವರಣ ಮಾಡಲಾಗಿದೆ.

ಒಬ್ಬೊಬ್ಬ ಶರಣರ ವಚನಕಾರರ ತಾತ್ವಿಕ ನಿಲುವು ಸ್ವಾಭಿಮಾನ ಮತ್ತು ಮನೋಧೋರಣೆಗಳನ್ನು ವಚನಗಳ ಸ್ವರೂಪದಲ್ಲಿ ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಬಸವಣ್ಣನವರ ವಚನಗಳಲ್ಲಿ ದಾಸೋಹ ಕಾಯಕ ಮಧ್ಯಮವರ್ಗ ಮತ್ತು ಕೆಳವರ್ಗಗಳ ನಡುವೆ ಇರುವ ದ್ವಂದ್ವ ದೈವದ ಪರಿಕಲ್ಪನೆಯನ್ನು ಈ ಅಧ್ಯಾಯದಲ್ಲಿ ತಾತ್ವಿಕವಾಗಿ ನೋಡಲಾಗಿದೆ.

ಹಾವಿನಹಾಳ ಕಲ್ಲಯ್ಯನು ಚಿನ್ನದ ಕುಶಲ ಕಲೆ ಎಂಬ ಮೂಲ ಕಸುಬನ್ನು ದೂರಕ್ಕೆ ತಳ್ಳಿ ಶಿವನ ಧ್ಯಾನದಲ್ಲಿ ಮಗ್ನನಾದನು. ಈ ಭಕ್ತಿಯಿಂದ ಕ್ರಿಯಾ ಶೀಲನಾಗಿ ಪವಾಡ ಸಾಧಕನಾಗಿ ಬದುಕಿನಲ್ಲಿ ಅಮರನಾಗಿದ್ದಾನೆ. ಅಲ್ಲದೆ ಭಕ್ತಿಯ ವಿಸ್ತಾರವೇ ಅವನ ಕಾಯಕವಾಯಿತು.

ಕಾಮಾಟದ ಭೀಮಣ್ಣನು ಮನೆ ಕಟ್ಟುವ ಕಾಯಕದಲ್ಲಿ ತೊಡಗಿದ್ದನು. ಈತನ ವಚನಗಳು ಬೆಡಗಿನ ವಚನೋಪಾದಿಯಲ್ಲಿ ಇವೆ ಆದುದರಿಂದ ಈತನು ರಚಿಸಿದ ತಾತ್ವಿಕ ವಿವೇಚನೆ ಮಾಡಲಾಗಿದೆ. ಗುಪ್ತಮಂಚಣ್ಣ ಅಥವಾ ಕೊಂಡೆಯ ಮಂಚಣ್ಣನು ಲೆಕ್ಕ ಪತ್ರದ ಕಾಯಕವನ್ನು ಮಾಡುತ್ತಿದ್ದನು ವೈಷ್ಣವ ಧರ್ಮದಲ್ಲಿ ಹುಟ್ಟಿ ಈತನ ಮಾನಸಿಕ ಹೊಯ್ದಾಟಗಳು ವಚನಗಳಲ್ಲಿ ವ್ಯಕ್ತವಾಗಿದೆ. ಆ ವಚನಗಳ ಸಂವೇದಗಳನ್ನು ಈ ಅಧ್ಯಾಯದಲ್ಲಿ ವ್ಯಕ್ತಪಡಿಸಲಾಗಿದೆ. ಮಾದಾರ ಚೆನ್ನಯ್ಯನ ವಚನಗಳು ಧರ್ಮ ಜಿಜ್ಞಾಸೆಯ ವಿಚಾರಗಳನ್ನು ಜೀವನ ಅನುಭವಗಳನ್ನು ವಿವರಿಸುತ್ತವೆ. ವರ್ಗ ಸಂಘರ್ಷದ ಸಾಮಾಜಿಕ ಶೋಷಣೆಗೆ ಒಳಗಾಗಿ ಜೀವನದಲ್ಲಿ ಬೇಸತ್ತು ತನ್ನ ವಚನಗಳ ವೈಧಾನಿಕತೆಯನ್ನು ಈ ಅಧ್ಯಾಯದಲ್ಲಿ ವಿವೇಚಿಲಾಗಿದೆ.

ನಾಲ್ಕನೇಯ ಅಧ್ಯಾಯದಲ್ಲಿ ಬಾಚಿಕಾಯಕದ ಬಸವಯ್ಯನ ವಚನಗಳಲ್ಲಿ ಕಾಳಿದೇವಿಯ ಪೂಜೆ ಮಾಡುವುದರ ಮೂಲಕ ಆರಂಭವಾಗುವ ಕ್ರೋಧ, ಮೋಹ, ಮಾಯೆ, ವ್ರತ ಋತುಕಾಲದ ವ್ಯಾಮೋಹ ಇವುಗಳ ವೈಚಾರಿಕತೆಯನ್ನು ಕುಲಗೋತ್ರ ಜಾತಿ, ಕಾಮ, ಯೋಗಸ್ಥಳ, ಪಂಚೇಂದ್ರಿಯ, ಶಾಸ್ತ್ರ, ತೃಥ್ವಿ, ಆಗ್ನಿ, ಕಮಲ, ವೇದ, ಉಪನಿಷತ್ತುಗಳ ಅರಿವನ್ನು ಈ ಅಧ್ಯಾಯದಲ್ಲಿ ತಿಳಿಸುವ ಪ್ರಯತ್ನ ಮಾಡಲಾಗಿದೆ.

ಅಧ್ಯಾಯ ಐದರಲ್ಲಿ ಬಾಚಿಕಾಯಕದ ಬಸವಯ್ಯನ ವೃತ್ತಿ ಬಡಿಗತನ ಜೀವನ ಕಾಯಕದ ಪರಿಕಲ್ಪನೆ ವಚನ ಚಳುವಳಿಯ ಭಾಗಿತ್ವತನದ ಪ್ರವೃತ್ತಿಯಲ್ಲಿ ಬೆಳೆದವನು. ಆದರೆ ಸಾಮಾಜಿಕ ವ್ಯವಸ್ಥೆಗೆ ಕೆಲವು ಪದ್ಧತಿಗಳಿಗೆ ಸಿಲುಕಿ ಪದ್ಧತಿಗಳ ವ್ಯಾಮೋಹಗಳನ್ನು ಬದಿಗೆ ಒತ್ತಿ ಕಾಯಕ ಶ್ರೇಷ್ಠತೆಯನ್ನು ಎತ್ತಿ ಹಿಡಿದನು. ಇಂತಹ ಕಾಯಕಯೋಗಿಯ ಜೀವನದ ಅನುಭವಗಳನ್ನು

ಮತ್ತು ಸಂವೇದನೆಗಳನ್ನು ಸಾಮಾಜಿಕ ಆಗು ಹೋಗುಗಳನ್ನು ತನ್ನ ವಚನಗಳಲ್ಲಿ ಹೇಳಿದ್ದಾನೆ. ವೃತ್ತಿ ಮೂಲ ಕಸುಬುದಾರನಾದ ಬಾಚಿಕಾಯಕದ ಬಸವಯ್ಯ ವೃತ್ತಿ ಹಾಗೂ ದೇಹವಾದಿ ದರ್ಶನದಿಂದ ಹೊರಬರದೇ ಅದರರಲ್ಲಿದ್ದುಕೊಂಡೆ ಆಧ್ಯಾತ್ಮಿಕ ಎತ್ತರಕ್ಕೆ ಏರಿದ್ದು ವಿಸ್ಮಯದ ವಿಷಯ ವೃತ್ತಿಗಳು ಜಾತಿಗಳಾಗಿ ಜಾತಿಗಳು ಜಡವಾಗಿ ಸಾಮಾಜಿಕ ಚಲನೆ ಸ್ಥಗಿತಗೊಂಡ ಹೊತ್ತಿನಲ್ಲಿ ತನ್ನ ಕಾಯಕ ಮೂಲದಿಂದಲೇ ದಾರ್ಶನಿಕ ಎತ್ತರಕ್ಕೇ ಬೆಳೆದ ಬಗೆಯನ್ನ ಅರಿಯುವುದು ಒಟ್ಟು ಈ ಅಧ್ಯಯನದ ಆಶಯವಾಗಿದೆ.

# ಅಧ್ಯಾಯ ಎರಡು

# ಬಾಚಿಕಾಯಕದ ಬಸವಯ್ಯನ ವೃತ್ತಿ ಹಾಗೂ ತತ್ವ ಮೀಮಾಂಸೆ

ವಿಶ್ವಕರ್ಮ ಸಮುದಾಯದ ಪರಂಪರಾನುಗತ ವೃತ್ತಿಗಳಾದ ಬಡಿಗ, ಕಮ್ಮಾರ, ಲೋಹಕಾರ, ಶಿಲ್ಪಕಾರ, ಅಕ್ಕಸಾಲಿ ಮುಂತಾದ ವೃತ್ತಿಗಳು ಸಂಸ್ಕೃತಿ ನಿರ್ಮಾಣದಲ್ಲಿ ಪ್ರಮುಖ ಪಾತ್ರ ವಹಿಸುತ್ತಾ ಬಂದಿವೆ. ಈ ವೃತ್ತಿ ಜೀವನದ ವಿವಿಧ ಮುಖಗಳ ಅನುಭವಗಳು ಸಾಹಿತ್ಯ ಮತ್ತು ಸಾಹಿತ್ಯೇತರ ಕೃತಿಗಳಲ್ಲಿ ಎರಕಗೊಂಡಿದೆ.

ಅದರಲ್ಲಿ ೧೨ನೇ ಶತಮಾನದಲ್ಲಿ ಬರುವ ಬಾಚಿಕಾಯಕದ ಬಸವಯ್ಯ ಒಬ್ಬ ಬಡಿಗ ವೃತ್ತಿಯವನು ಇವನ ವಿವಿಧ ಅಭಿವ್ಯಕ್ತಿ ಮುಖಗಳನ್ನು ಈ ಅಯದಲ್ಲಿ ಹೇಳುವ ಪ್ರಯತ್ನ ಮಾಡಲಾಗಿದೆ. ಬಾಚಿಕಾಯಕದ ಬಸವಯ್ಯ ಎಂಬ ಶರಣನ ಜೀವನದ ಅನುಭವದ ನೆಲೆಗಳನ್ನು ಆತನ ಅಭಿವ್ಯಕ್ತಿಯ ತತ್ವಗಳನ್ನು ಹಾಗೂ ಬೆಡಗಿನ ವಚನ ಸಾಹಿತ್ಯವನ್ನು ವಿಮರ್ಶಾತ್ಮಕವಾಗಿ ಈ ಅಯದಲ್ಲಿ ಕಟ್ಟಿಕೊಡಲಾಗುತ್ತದೆ.

ಅಂದಿನ ಕಾಲದಲ್ಲಿ ಜಾತಿ, ವರ್ಗ, ವೃತ್ತಿ ವಿವಿಧ ರೀತಿಯ ಕುಲಕಸುಬುಗಳು ಮಾನವೀಯ ನೆಲೆಯಲ್ಲಿ ಮೈದೋರಿ ನಿಂತಿವೆ. ಅಂತಹ ಜಾತಿ ಸಂಘರ್ಷ ಅಥವಾ ಶೋಷಣೆಗೆ ಒಳಗಾದವರಲ್ಲಿ ಬಾಚಿಕಾಯಕದ ಬಸವಯ್ಯ ಒಬ್ಬರಾಗಿದ್ದಾರೆ.

ಈ ಅಧ್ಯಾಯದಲ್ಲಿ ಬಾಚಿಕಾಯಕದ ಬಸವಯ್ಯನ ವೃತ್ತಿ ಮತ್ತು ಮೀಮಾಂಸೆಯ ತಾತ್ವಿಕ ನೆಲೆಗಳನ್ನು ಹಾಗೂ ಈತನ ವೃತ್ತಿಗೆ ಸಂಬಂಧಿಸಿದ ಪರಿಕರಗಳಾದ ಉಳಿ, ಬಾಚಿ, ಹತ್ತರಿ, ಗರಗಸಗಳು ಈತನ ಜೀವನ ಸಾಗಿಸುವ ವಿವಿಧ ಆಯುಧಗಳನ್ನು ಇಲ್ಲಿ ಹೆಸರಿಸಲಾಗಿದೆ.

ಶ್ರಮಿಕ ವರ್ಗದ ಬೌದ್ಧಿಕ ನೆಲೆಗಳನ್ನು, ವೈಧಿಕ ವರ್ಗದ ವಿವಿಧ ಮುಖಗಳನ್ನು, ತಮ್ಮ ವೃತ್ತಿಯ ದೈಹಿಕ ಶ್ರಮದ ನೆಲೆಗಳನ್ನು ಕಟ್ಟಿ ಕೊಡುವುದರ ಮೂಲಕ ವೈದಿಕ ವರ್ಗದ ತತ್ವಗಳ ವೈಫಲ್ಯತೆಗೆ ಪ್ರಮುಖವಾಗಿ ಕಾರಣೀಭೂತರಾಗುತ್ತಾರೆ.

ವಚನಕಾರರ ಸಂಸ್ಕೃತಿ, ಸಮುದಾಯ, ಧಾರ್ಮಿಕ ಆಚರಣೆ ಹಾಗೂ ಸಮಾಜದ ವಿವಿಧ ಅಸಮಾನತೆಯ ನೆಲೆಗಳ ಪರಿಕಲ್ಪನೆಗಳನ್ನು ಆಧರಿಸಿ ವಿವಿಧ ವೃತ್ತಿಯ ಸಾಂಸ್ಕೃತಿಕ ನೆಲೆಗಳನ್ನು ಕಾಣುತ್ತೇವೆ.

"ಹಳ್ಳಿ ಬದುಕಲ್ಲಿ ಕ್ಷೌರಿಕ, ಕಮ್ಮಾರ, ಬಡಿಗ, ಕುಂಬಾರ, ಸಮಗಾರ ವೃತ್ತಿಗಳು ಹುಟ್ಟು, ಸಾವು, ಮದುವೆ, ಮುಂಜಿ, ರೋಗ-ರುಜಿನಗಳಂತಹ ಸಾಮಾಜಿಕ ಹಾಗೂ ವೈಯಕ್ತಿಕ ಸಂದರ್ಭಗಳಲ್ಲಿ ಅನಿವಾರ್ಯವಾಗಿ ಬೇಕಾಗುವಂಥವುಗಳು"[1]

ಇಂತಹ ವೃತ್ತಿ ಕೆಲಸಗಳು ಶ್ರೇಷ್ಠ ಕನಿಷ್ಠ ಎಂಬ ಶ್ರೇಣೀಕೃತ ವ್ಯವಸ್ಥೆಯಲ್ಲಿ ಅಳೆಯುವ ವಿಧಾನ ಶರಣರ ಕಾಲದಿಂದಲೇ ಪರಿಗಣಿಸಲಾಗಿತ್ತು. ಬೌದ್ಧಿಕ ವರ್ಗಗಳು ದುಡಿಯುವ ವರ್ಗದವರನ್ನು ಕೀಳಾಗಿ ಕಾಣುವ ಅಸಮಾನತೆ ವೃತ್ತಿ ನಿರತ ಶರಣರ ಬೆನ್ನ ಹಿಂದೆ ತನ್ನ ಬಡಿಗ ವೃತ್ತಿಯೊಳಗಿಂದಲೇ ಹುಟ್ಟಿ ಬಂದ ಶಿವಶರಣರ ಸಾಂಸ್ಕೃತಿಕ ವಿನ್ಯಾಸವನ್ನು ವ್ಯಾಖ್ಯಾನಿಸಲು ಪ್ರಯತ್ನಿಸಿದ್ದೇನೆ.

ಏಣಿ ಶ್ರೇಣಿ ವ್ಯವಸ್ಥೆಗೆ ಸಿಲುಕಿದ ವೃತ್ತಿ ಧರ್ಮದವರು ಹಾಗೂ ಅವರ ಚಿಂತನೆಗಳು ತಮ್ಮ ಆರ್ಥಿಕ ವ್ಯವಸ್ಥೆಯ ನೆಲೆಯಲ್ಲಿ ತಮ್ಮ ಜೀವನ ಸಾಗುತ್ತಿದೆ. ಸಾಮಾಜಿಕವಾಗಿ ಅವರ ಸ್ಥಿತ್ಯಂತರದಿಂದ ವೃತ್ತಿ ಸಹಜವಾದ ಬಡಿಗ, ಕಮ್ಮಾರ ಮುಂತಾದ ವೃತ್ತಿಗಳು ಮನುವ್ಯವಸ್ಥೆಯ ಅಡಿಯಲ್ಲಿ ಸಿಲುಕಿ ಕೀಳಾಗಿ ಕಾಣಿಸಿಕೊಳ್ಳುತ್ತವೆ. ಇಂತಹ ಕೀಳುತನವನ್ನು ಮರೆಮಾಚಲು ಸಂಸ್ಕೃತ ಮತ್ತು ಇಂಗ್ಲೀಷ್ ಶಬ್ದಗಳಾದ ಕಾರ್ಪೆಂಟರ್, ಗೋಲ್ಡ್‌ಸ್ಮಿತ್, ಬ್ಲಾಕ್‌ಸ್ಮಿತ್, ಆಚಾರಿ ಇತ್ಯಾದಿ ಶಬ್ದಗಳನ್ನು ಉಪಯೋಗಿಸುತ್ತಾರೆ.

ವೃತ್ತಿ ಕಾಯಕದವರ ಜೀವನಕ್ಕೆ ಮುಖ್ಯ ಆಧಾರ ಸ್ತಂಭಗಳೆಂದರೆ ಪ್ರಾಣಿ, ಪಕ್ಷಿ, ಲೋಹ, ಉದ್ಯೋಗದ ರೂಪಕಗಳು. ಇವು ದುಡಿಯುವ ವರ್ಗದ ಮುಖ್ಯ ನೆಲೆಗಳಾಗಿವೆ. ಆದರೆ ದುಡಿಯುವ ವರ್ಗದ ಜನರ ಬದುಕಿನ ಬವಣೆ ಮತ್ತು ಅವರ ಕೆಲಸದ ವಿವಿಧ ಪರಿಕರಗಳು, ಪ್ರಾಣಿ, ಪಕ್ಷಿ, ಆಹಾರ ಪದಾರ್ಥಗಳು ಮುಂತಾದ ತತ್ವಗಳು ಆತ್ಮವಾದಿಗಳಿಗೆ ಮೈಲಿಗೆಯಾಗಿ ಕಾಣಿಸಿಕೊಳ್ಳುತ್ತವೆ. ಅಲ್ಲದೆ, ಅನಿಷ್ಠ ಪದ್ಧತಿಗಳಾಗಿ ಕಂಡುಬರುತ್ತವೆ. ಈ ವಿಚಾರಗಳು ಶ್ರಮಿಕ ವರ್ಗದ ವಚನಕಾರರಿಗೆ ರೂಪಕಾತ್ಮಕತೆಯನ್ನು ಆಯ್ದುಕೊಳ್ಳುವ ಕಾಯಕವನ್ನು ಆದರ್ಶೀಕರಿಸುವ ಹಂಬಲದಲ್ಲಿಯೇ ಈ ಶಂಕೆಗಳಿಗೆ ಗರಿ ಮೂಡುತ್ತವೆ.

ಬಾಚಿಕಾಯಕದ ಬಸವಯ್ಯನ ದಾರ್ಶನಿಕತೆ ಲೌಖಿಕ ಜಗತ್ತಿನ ಪರಿಭಾಷೆಗಳ ವೃತ್ತಿ ಜೀವನ ಸಂವೇದನೆಗಳು ವಚನ ಸಾಹಿತ್ಯದ ಸೂಕ್ಷ್ಮ ಅಭಿವ್ಯಕ್ತಿ ಕ್ರಮದಲ್ಲಿ ಗ್ರಹಿಸಲಾಗಿದೆ. ಈತನ ವಚನಗಳಲ್ಲಿ ವೃತ್ತಿ ಮೂಲದ ತನ್ನ ಮನಸ್ಸಿನ ಒಳಗೆ ಇರುವ ಸಂವೇದನೆಗಳು, ವರ್ತನೆಗಳು, ತನ್ನಲ್ಲಿ ಅಡಗಿರುವ ಜಿಜ್ಞಾಸೆಗಳು ಈತನ ವಚನಗಳ ಮೂಲಕ ಒಂದು ಸಂಪ್ರದಾಯದ ಚೌಕಟ್ಟಿನಲ್ಲಿ ವಾಸ್ತವ ನೆಲೆಯ ಮೂಲಕ ಲೌಖಿಕ ಜಗತ್ತಿನ ವೈಧಾನಿಕತೆಯ ತತ್ವಗಳ ರೂಪಕಗಳಲ್ಲಿ ಸಾಹಿತ್ಯ ಸೂಕ್ಷ್ಮತೆಯನ್ನು ಕಟ್ಟಿಕೊಡಲಾಗುವುದು.

ಬೌದ್ಧಿಕ ವರ್ಗದ ಸೂಕ್ಷ್ಮತೆಯನ್ನು ದಾಖಲಿಸದೆ ತನ್ನ ದಾರ್ಶನಿಕತೆಯ ಒಳಹರಿವುಗಳ ಮೂಲಕ ಜೀವನದ ಎಳೆಗಳನ್ನು ಸೂಕ್ಷ್ಮವಾಗಿ ಹೊರ ಹಾಕುತ್ತಾರೆ. ಉಳಿದ ವಚನಕಾರರಿಗಿಂತ ಮತ್ತು ಶರಣರಿಗಿಂತ ಭಿನ್ನವಾಗಿ ವೈಯಕ್ತಿಕ ನೆಲೆಯಲ್ಲಿಯೇ ಜೀವನವನ್ನು ಸಾಗಿಸುತ್ತಾರೆ.

ವಚನಕಾರರಾದ ಬಸವಣ್ಣ, ಅಲ್ಲಮಪ್ರಭು. ಮುಂತಾದ ಬದುಕಿನ ಸಂಕೀರ್ಣ ಸ್ವರೂಪದ ನೆಲೆಯಲ್ಲಿ ಶೋಧಿಸಲು ಅವರ ಅನುಭವದ ಮಾನಸಿಕ ಧೋರಣೆ ಹಾಗೂ ವೈಯಕ್ತಿಕ ಭಿನ್ನತೆ ಅವರ ಜೀವನ ಚಿತ್ರಣದ ವಿನ್ಯಾಸ ಇವುಗಳನ್ನು ಶೋಧಿಸುವ ಭಿನ್ನ ನೆಲೆಯನ್ನು ಕುತೂಹಲಕಾರವಾಗಿ ಬಸವಯ್ಯನ ವೃತ್ತಿಜೀವನದ ಭಿನ್ನ ನೆಲೆಯನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಪರಂಪರಾನುಗತವಾಗಿ ಬಂದ ಕುಟುಂಬ ಪರಿವಾರದ ಮೌಲ್ಯಗಳನ್ನು ದೇಹ ಮನಸ್ಸುಗಳು ಎಂಬ ದೃಷ್ಠಿಕೋನಗಳ ಮೂಲಕ, ಸನಾತನ ಧರ್ಮದ ಸಾಮಾಜಿಕ ಮೌಲ್ಯಗಳ ತಾತ್ವಿಕ ಪ್ರಜ್ಞೆಯನ್ನು ಮೂಡಿಸಲಾಗಿದೆ.

ವಿಶ್ವಕರ್ಮ ಕುಲದಲ್ಲಿ ಹುಟ್ಟಿದ ಬಸವಯ್ಯನು ಸನಾತನ ಧರ್ಮದ ಮೌಲ್ಯಗಳ ನೆಲೆಯಲ್ಲಿ ಬದುಕುತ್ತಾನೆ. ಆದರೆ ಜಡ ಮೌಲ್ಯಗಳು ಸಮಾಜದ ವಿರೋಧಿ ನೀತಿಗಳನ್ನು, ನಿರಂಕುಶ ಪ್ರಭುತ್ವದ ನೆಲೆಗಳನ್ನು ಉಗ್ರವಾಗಿ ವಿರೋಧಿಸುತ್ತಾನೆ.

“ಇವನ ಜೊತೆಗೆ ಅಕ್ಕಸಾಲಿಗನಾದ ಹಾವಿನಹಾಳ ಕಲ್ಲಯ್ಯ, ಕಿನ್ನರಿ ಬೊಮ್ಮಯ್ಯ, ಮನೆಕಾಯಕದ ಕಾಮಾಟದ ಭೀಮಣ್ಣ ಹಾಗೂ ನಂತರದಲ್ಲಿ ಬಂದ ತಿಂಥಿಣಿ ಮೋನಪ್ಪಯ್ಯ ಪರಂಪರೆಯ ಜಡತ್ವದ ವಿರುದ್ಧ ಬಂಡಾಯ ಸಾರಿದ ಪ್ರಮುಖರು”[೨]

ಇವರು ವೃತ್ತಿ ಮೂಲದ ಪರಂಪರೆಯ ತನ್ನ ಕುಲದ ನೆಲೆಯಲ್ಲಿಯೇ ಉಳಿಯುವ ಪ್ರಯತ್ನ ಒಂದೆಡೆಯಾದರೆ ಮತ್ತೊಂದೆಡೆ ಶರಣರ ವೈಚಾರಿಕ ನೆಲೆಯಲ್ಲಿ ಭಿನ್ನವಾಗಿ ಬದುಕಿದವರು. ಸಮಾಜದ ನೆಲೆಯಲ್ಲಿ ಬದುಕುವ ಶರಣರು ಬ್ರಾಹ್ಮಣಶಾಹಿ ವರ್ಗದ ಅಸ್ತಿತ್ವವನ್ನು ಮುಟ್ಟುಗೋಲು ಹಾಕಲು ತೀಕ್ಷ್ಣವಾದ ಪ್ರತಿಕ್ರಿಯೆ ತೋರಿಸುವ ತಮ್ಮ ಎಲ್ಲಾ ಕುಲಮೂಲದವರು ಒಂದಾಗಿ ಕ್ರಿಯಾತ್ಮಕವಾಗಿ ಸಮಾಜದ ನೆಲೆಯ ಅಸ್ತಿತ್ವಕ್ಕೆ ಅಡಿಪಾಯ ಹಾಕಿದರು.

“ಬಾಚಿಕಾಯಕದ ಬಸವಯ್ಯನ ಈ ತಾತ್ವಿಕ ದರ್ಶನವನ್ನು ಎರಡು ನೆಲೆಯಲ್ಲಿ ನೋಡುವುದು ಅತ್ಯವಶ್ಯಕ ಒಂದು ಆತನ ವೃತ್ತಿಪರವಾದ ರಚನಾತ್ಮಕ ನೆಲೆ ಎರಡು ಅರಿವು ಪ್ರಧಾನವಾದ ದಾರ್ಶನಿಕ ನೆಲೆ ವಿಶ್ವಕರ್ಮ ಮೂಲ ತತ್ವವೆಂದರೆ ಸೃಷ್ಟಾತ್ಮಕತೆ”[೩]

ಈ ಗುಣ ಬಸವಯ್ಯ ಹಾಗೂ ಹಲವು ವಚನಕಾರರು ಮತ್ತು ಶರಣರು ವೃತ್ತಿ ಮೂಲದವರು. ಸಮಾಜಿಕ ನೆಲೆಯಲ್ಲಿ ಬದುಕುವವರು ಮುಂತಾದ ವೃತ್ತಿ ಧರ್ಮದವರಲ್ಲಿ ವೈಚಾರಿಕ ನೆಲೆಯು ಎದ್ದು ಕಾಣುತ್ತದೆ.

ವೃತ್ತಿ ಮೂಲದ ವಿಶ್ವಕರ್ಮದ ಕಾಯಕದಲ್ಲಿ ಬೆಳೆದ ಬಸವಯ್ಯ ಕಾಯಕವೇ ಕರ್ಮ ಎಂದು ತಿಳಿದು ಸಮಾಜದ ಏಳಿಗೆಗಾಗಿ, ಉದ್ದಾರಕ್ಕಾಗಿ, ಲೋಕ ಕಲ್ಯಾಣದ ಏಳಿಗೆಗಾಗಿಯೇ ಸದಾ ತನ್ನ ಜೀವನವನ್ನ ಸರ್ವತ್ಯಾಗ ಮಾಡಿದನು. ಲೋಕ ಕಲ್ಯಾಣದ ಸಾಧನೆಯೇ ತನ್ನ ಆತ್ಮ ಮನಶಾಂತಿಯು ಶುದ್ಧೀಕರಣಗೊಂಡು ಧರ್ಮದ ಹಾದಿಯನ್ನು ಬದುಕಿನ ಬಂಡಿಯು ಹಿಡಿಯುತ್ತದೆ.

ತನ್ನ ಕಾಯಕವೇ ಕರ್ಮ ಜೀವನದ ಹಾದಿ ಎಂಬ ತತ್ವ ಸಿದ್ಧಾಂತವನ್ನು ವಿಶ್ವಕರ್ಮ ಪಥದ ಆದಿ ದೇವತೆ ವಿಶ್ವಕರ್ಮ ಎಂದು ಹೇಳಬಹುದು.

"ಬಾಚಿಕಾಯಕದ ಬಸವಯ್ಯನ ಒಟ್ಟು ವಚನಗಳನ್ನು ಗಮನಿಸಿದಾಗ ಅಲ್ಲಿ ಕಂಡುಬರುವ ರೂಪಕಗಳಲ್ಲಿ ಹೆಚ್ಚಿನವು ಮನೆ ಮತ್ತು ಅದರ ಪರಿಕರಗಳು ಹಾಗೂ ರಥ ಮತ್ತು ಅದರ ಇತರ ಸಾಮಾಗ್ರಿಗಳು ಬಹಳ ಮುಖ್ಯವಾಗಿ ಮನೆ ಮತ್ತು ರಥಗಳು ಬಸವಯ್ಯನಲ್ಲಿ ದೇಹ ಆತ್ಮ-ಕ್ರಿಯೆ ಮತ್ತು ಅರಿವಿನ ಸೂಚಕಗಳಾಗಿ ಮೈಗೂಡಿಸಿಕೊಳ್ಳುತ್ತದೆ."[೪]

ಬಸವಯ್ಯನು ಅಂತರಂಗ ಮತ್ತು ಬಹಿರಂಗ ಎಂಬ ಎರಡು ಪರಿಕಲ್ಪನೆಯ ಮೂಲಕ ದೇಹ, ಮನಸ್ಸು, ಅಧ್ಯಾತ್ಮಿಕ ಜ್ಞಾನದ ಪರಿಶುದ್ಧಿಯ ಪ್ರಜ್ಞೆಯನ್ನು ಕುರಿತು ತನ್ನ ವಚನಸಾರದಲ್ಲಿ ವಿವರಿಸಲಾಗಿದೆ. ಎಲ್ಲಕ್ಕಿಂತ ಮನುಷ್ಯನಿಗೆ ಮುಖ್ಯವಾಗಿ ಬೇಕಾದದ್ದು ಆತ್ಮ ಶಾಂತಿ ಈ ವಿಕಾಸದೆಡೆಗೆ ತನ್ನ ಮಾನವರೆಲ್ಲರೂ ಈ ಜಗತ್ತಿನ ಭೌತಿಕ ದೇಹದ ಆಸೆ ಆಕಾಂಕ್ಷೆಗಳಲ್ಲಿಯೇ ಜೀವಿಸುತ್ತಾರೆ.

ಇದನ್ನು ಹೊರತು ಪಡಿಸಿ ಆತ್ಮಶುದ್ಧಿಯ ತತ್ವದ ಹಿನ್ನೆಡೆಯಲ್ಲಿ ವಾಸ್ತವಿಕವಾಗಿ ಈ ಜಗತ್ತಿನ ಮಾನವ ವಿಕಾಸದ ಸಾಧ್ಯತೆಗಳ ಸಾಧನೆಯ ಎಡೆಯಲ್ಲಿ ಮನೆ ಮತ್ತು ರಥ ದೇಹ ಹಾಗೂ ಆತ್ಮದ ಪರಿಕಲ್ಪನೆ ಇವುಗಳ ಅರಿವಿನ ಆಧ್ಯಾತ್ಮಿಕ ಸಾಧನೆಯ ಜೀವನ ವಿಕಾಸದ ಮಾನವನ ಪ್ರತೀಕವಾಗಿ ಜ್ಞಾನದ ವಿಸ್ತಾರ ಈತನ ವಚನಗಳಲ್ಲಿ ಅರಿದಾಡುತ್ತದೆ.

ಈ ಮೇಲಿನ ತತ್ವಗಳ ಪರಿಕಲ್ಪನೆಯೂ ರೂಪ ಮತ್ತು ನಿರೂಪದ ಪ್ರಶ್ನೆಗಳನ್ನು ಬಸವಯ್ಯನು ದೇಹ ಮತ್ತು ಆತ್ಮದ ಹಿನ್ನೆಲೆಯಲ್ಲಿ ಮನುಷ್ಯನ ಭೌತಿಕ ನೆಲೆಯಲ್ಲಿ ಪ್ರಶ್ನಿಸುತ್ತಾನೆ.

ಬಸವಣ್ಣನು ಸಹ ಅಂತರಂಗ ಮತ್ತು ಬಹಿರಂಗ ಪರಿಕಲ್ಪನೆಗಳ ಮೂಲಕ ಸಮಾಜದ ವಿವಿಧ ಮುಖಗಳನ್ನು ಪರಿಚಯಿಸಿ ಕೊಡುತ್ತಾನೆ. ದೇವಲೋಕ ಮತ್ತು ಮರ್ತ್ಯಕ ಲೋಕ ಇವೆರಡರ ಲೌಖಿಕ-ಅಲೌಖಿಕ ಜ್ಞಾನದ ಅರಿವನ್ನು ಸಮಾಜದ ಬಹಿರ್ಮುಖ ಚಲನೆಯ ಮೂಲಕ ಸಾಮಾಜಿಕ ಪ್ರಜ್ಞೆಯನ್ನು ಜನರಿಗೆ ಮೂಡಿಸಿದ್ದಾರೆ. ಅದರಂತೆ ಮನುಷ್ಯರ ವರ್ತನೆ, ಸ್ವಭಾವ, ನಿರ್ಗುಣ ಮತ್ತು ಸುಗುಣ ಹಾಗೂ ಕೆಲವು ಸಮಾಜದ ದುರ್ವರ್ತನೆಗಳ ನಿರಾಕರಣೆಯ ತಾತ್ವಿಕ ನಿಲುವುಗಳ ಪರಿಚಯ ಬಸವಯ್ಯನ ವಚನಗಳಲ್ಲಿ ಕಂಡುಬರುತ್ತದೆ.

ಬಸವಣ್ಣ, ಅಲ್ಲಮಪ್ರಭು ಮತ್ತು ಬಸವಯ್ಯ ಈ ಮೂಲಕ ರೂಪ ಮತ್ತು ನಿರೂಪ ಇವುಗಳ ಕ್ರಿಯಾಶೀಲ ವ್ಯಕ್ತಿತ್ವ ಅನುಭವಗಳನ್ನು ಒಬ್ಬೊಬ್ಬರಲ್ಲಿಯೂ ವಿಭಿನ್ನವಾಗಿ ಸಾಮಾಜಿಕ ಮತ್ತು ತತ್ವಜ್ಞಾನದ ನೆಲೆಗಳು ಕಂಡು ಬರುತ್ತವೆ. ಅದರಂತೆ ವಾಸ್ತವ ಸ್ಥಿತಿಗತಿಯು ವ್ಯಕ್ತಿತ್ವದ ವಿಕಾಸದ ಅಗತ್ಯಕ್ಕನುಗುಣವಾಗಿ ದಾರ್ಶನಿಕತೆಯ ಮೌಲ್ಯವು ವಿಸ್ತರಿಸಿಕೊಳ್ಳುತ್ತದೆ.

ಬಸವಯ್ಯನು ವೃತ್ತಿ ಪರಂಪರೆಯ ವಚನಕಾರರಿಗಿಂತ ಭಿನ್ನವಾಗಿ ಮೂರ್ತ ಮತ್ತು ಅಮೂರ್ತ ಸಾಮಾಜಿಕ ವಾಸ್ತವತೆಯನ್ನು ಕುರಿತು ಚಲನಶೀಲವಾದ ಮತ್ತು ಜಡತ್ವದ ವಾಸ್ತವತೆಯನ್ನು ಬಿಚ್ಚುತ್ತಾ ಅದರ ವಿಕಾಸದ ಪರಿಕರಗಳನ್ನು ಚರ್ಚಿಸುತ್ತಾನೆ. ಈ ಮೌಢ್ಯ ಜಡತ್ವವನ್ನು ಶೋಧಿಸುವ ಜ್ಞಾನ ತನ್ನ ವೃತ್ತಿ ಕರ್ಮದ ತಾತ್ವಿಕ ನೆಲೆಯಲ್ಲಿ ತನ್ನ ವೃತ್ತಿ ಜೀವನವನ್ನು ನಡೆಸುತ್ತಾನೆ. ಇಷ್ಟೇ ಅಲ್ಲದೆ ತಾರ್ಕಿಕವಾದ ವಿಚಾರಧಾರೆಗಳನ್ನು ಬಸವಯ್ಯನ ವಚನಗಳಲ್ಲಿ ಕಾಣುತ್ತೇವೆ.

"ಘಟಸ್ಥಾವರದೊಳಗನೊಡೆದು ಕಿಚ್ಚಿನ ಹೊಲೆಯಂ ಕಂಡೆ
ಕಾಣಿಸಿ ಮಿಕ್ಕಾದ ಹೊರಗಣ ಹೊರೆಯ ತಿಗುಡಂ ಕೆತ್ತಿ
ಕಂಬವ ಶುದ್ಧೈಸಿ ನೆಲವಟ್ಟಕ್ಕೆ ಚದುರಸವನಿಂಬುಗೊಳಿಸಿ
ಮೇಲಣ ವಟ್ಟಕ್ಕೆ ಎಂಟು ಧಾರೆಯ ಏಣಂ ಮುರಿದು
ಕಡಿಗೆ ವಟ್ಟ ವರ್ತುಳಾಕಾರದಿಂ ಶುದ್ಧವ ಮಾಡಿ
ಏಕೋತ್ತರ ಶತಸ್ಥಲವನೇಕೀಕರಿಸಿ
ಒಂದು ದ್ವಾರದ ಬೋದಿಗೆಯಲ್ಲಿ ಕಂಬವ ಶುದ್ಧೈಸಿ
ಕಂಬ ಎರವಿಲ್ಲದೆನಿಂದ ಮತ್ತೇ ಚದುರಸಭೇದ
ಅಷ್ಟದಿಕ್ಕಿನ ಬಟ್ಟೆ ಕೆಟ್ಟು ನವರಸಬಾಗಿಲು ಮುಚ್ಚಿ
ತ್ರಿಕೋಣೆಯನುಲು ಹುಗಟ್ಟು ಮುಂದಣ ಬಾಗಿಲು ಮುಚ್ಚಿ
ಹಿಂದಣ ಬಾಗಿಲು ಕೆಟ್ಟು ನಿಜವೊಂದೇ ಬಾಗಿಲಾಯಿತ್ತು
ಈ ಕೆಲಸವ ಆ ಕಂಬದ ನಡುವೆ ನಿಂದು ನೋಡಲಾಗಿ
ಮಂಗಳ ಮಯವಾಗಿ ಇದು ಯೋಗಸ್ಥಲವಲ್ಲ
ಇದು ಘನಲಿಂಗ ಯೋಗಸ್ಥಲ ಇಂತೀ ಬೇದವ ತಿಳಿದಡೆ
ಬಸವಣ್ಣ ಪ್ರಿಯ ವಿಶ್ವಕರ್ಮಟಕ್ಕೆ
ಕಾಳಿಕಾ ವಿಮಲ ರಾಜೇಶ್ವರ ಲಿಂಗವಲ್ಲದಿಲ್ಲಾ ಎಂದೆ"[೫]

ಮನುಷ್ಯನಿಗೆ ಬೇಕಾಗಿರುವುದು ಆತ್ಮಶುದ್ಧಿ ಅದನ್ನು ಪಡೆಯಲು ನಾವು ಧ್ಯಾನ, ತಪಸ್ಸು, ನೀತಿ, ನಿಯಮ, ಶೀಲ ಇಂತಹವುಗಳ ಪರಿಪಾಲನೆ ಮಾಡಬೇಕಾಗುತ್ತದೆ. ಆದರೆ ಬಸವಯ್ಯನು ಇವುಗಳನ್ನು ಧಿಕ್ಕರಿಸುತ್ತಾನೆ. ನಂತರ ಸಮಾಜದಲ್ಲಿ ಬಳಸಿಕೊಳ್ಳುವ, ಸಂಸ್ಕರಿಸುವ ರೂಪವನ್ನು ಪರಿಕರಗಳಾಗಿ ಬಳಸಿಕೊಳ್ಳುತ್ತಾನೆ.

ವೃತ್ತಿ ಸಹಜ ಪರಿಕರಗಳು ಮತ್ತು ಪರಿಭಾಷೆಗಳಾದ ಬಾಚಿ, ಉಳಿ, ಕೊಡತಿ, ಏಣು, ಕಂಬ, ಚೌಷಪ್ಪಿ, ಬೋದಿಗೆ, ಮಡಿಕೆ, ಕಂಬ ಇವೆಲ್ಲ ಆತನ ರೂಪಕಾಕೃತಿಯ ಸರಂಜಾಮುಗಳಾಗಿವೆ.

ಈ ವೃತ್ತಿ ಕಲೆಯಲ್ಲಿ ಬದುಕುವ ಬಸವಯ್ಯ ಲೋಕೋಪಕಾರದ ಉದ್ಧಾರಕ್ಕಾಗಿ ಪ್ರಕೃತಿಯ ಮಡಿಲೆ ಸತ್ಯ ಅಸತ್ಯದ ಅನ್ವೇಷಣೆಗಾಗಿ ಉಳಿ, ಬಾಚಿ, ಕೊಡತಿ ಈ ಆಯುಧಗಳ ಮೂಲಕ ಸಮಾಜ ಸೇವೆಗೈಯ್ಯುತ್ತಾನೆ.

ಈ ಪ್ರಕೃತಿಯ ಮಡಿಲಲ್ಲಿ ಬೆಳೆದ ನಾವು ನಮ್ಮ ಮನಸ್ಸಿನ ಭಾವನೆಗಳನ್ನು ಆಸೆ ಆಕಾಂಕ್ಷೆಗಳನ್ನು ನಿಯಂತ್ರಿಸಿಕೊಳ್ಳಬೇಕು. ನಮ್ಮ ದೇಹದ ಸಹಜ ಪ್ರಕೃತಿಯ ವಿರುದ್ಧವಾಗಿ ನಡೆದುಕೊಳ್ಳದೆ, ಅದನ್ನು ದೇಹವನ್ನು ತಿದ್ದುವ ಸಮಂಜಸವಾದ ಒಂದು ರೂಪವನ್ನು ತಾಳುವ ಹಾಗೂ ಆ ದೇಹವನ್ನು ದುಡಿಸಿಕೊಳ್ಳುವ ಇಂತಹ ಸಂಗತಿಗಳನ್ನು ಗ್ರಹಿಸುವುದು ಅವಶ್ಯಕ. ಇವುಗಳ ಅರಿವಿನಲ್ಲಿ ಬಾಳುವ ಮನಸ್ಸು ಶುದ್ಧೀಕರಿಸುವ ಒಂದು ಷಟಸ್ಥಲ ಪರಿಕಲ್ಪನೆಯ ಭಕ್ತಿಭಾವದ ಅರಿವಿನ ಜ್ಞಾನ ನಮಗೆ ಇರಬೇಕು.

ವೃತ್ತಿ ಕಲೆಯಲ್ಲಿ ಪರಿಣಿತಿ ಹೊಂದಿದ ಬಸವಯ್ಯ ಒಂದು ಮನೆಯ ಆಕೃತಿ ನಿರ್ಮಾಣಕ್ಕೆ ಅಥವಾ ಆಲಯಕ್ಕೆ ಇವುಗಳ ಸುಳಿವು ಮತ್ತು ವಿನ್ಯಾಸ ಯಾವ ಚೌಕಟ್ಟಿನ ಆಕಾರದಲ್ಲಿ ನಿರ್ಮಾಣ ಮಾಡಬೇಕು ಎಂಬ ಪರಿಕಲ್ಪನೆ ವೃತ್ತಿಕಾರನಿಗೆ ಇರಬೇಕು. ಅಂತಹ ಜ್ಞಾನದ ಅರಿವುಳ್ಳ ಸೃಜನ ಶೀಲ ವ್ಯಕ್ತಿಯಾದ ಬಸವಯ್ಯನ ವೃತ್ತಿಯ ಗುಣ ಧರ್ಮವೇ ಕ್ರಿಯಾಶೀಲವುಳ್ಳ ವ್ಯಕ್ತಿ. ಈತನು ಯಾರಿಗೂ ಹಗೆತನವನ್ನು ಬಗೆದವನಲ್ಲ ಅಂತಹ ವಿಷಮಗುಣವುಳ್ಳ ವ್ಯಕ್ತಿಗಳನ್ನು ಧಿಕ್ಕರಿಸದೆ ಅವರಿಗೆ ಒಳ್ಳೆಯ ಹಾದಿಯಲ್ಲಿ ನಡೆಯುವಂತೆ ಸುಳಿವುಗಳನ್ನು ನೀಡಿದನು. ಹಾಗೆಯೇ ತನ್ನ ವೃತ್ತಿ ಧರ್ಮವೇ ಜೀವನವನ್ನು ಕಾಪಾಡಬಲ್ಲ ಶಕ್ತಿ ಇದೆ. ಇಂತಹ ಶಕ್ತಿ ಮೂರ್ತದೊಳಗೆ ಅಡಗಿದೆ ಅಂತಹದ್ದನ್ನು ಅಮೂರ್ತದೆಡೆಗೆ ಅರಿವು ಮೂಡಿಸುವ ಕ್ರಿಯಾಶೀಲವುಳ್ಳ ವೃತ್ತಿ ಧರ್ಮದವನು ಎಂದು ಹೇಳಬಹುದು.

"ರೈತನೊಬ್ಬ ತನಗೊಂದು ಮಡಿಕೆ ಬೇಕೆಂದು ಬಡಿಗನ ಅಡಿಕಟ್ಟಿಗೆ ಬಂದಾಗ ಬಡಿಗನಾದವ ಸಿಕ್ಕ ಸಿಕ್ಕ ಕೊರಡುಗಳಲ್ಲಿ ಮಡಿಕೆಯನ್ನು ಹುಡುಕುವುದಿಲ್ಲ. ಮಡಿಕೆಯ ಲಕ್ಷಣವನ್ನು ಹೊಂದಿದ ಕೊರಡೊಂದನ್ನು ಆಯುತ್ತಾನೆ. ಈ ಆಯ್ಕೆ ಆತನ ಭಿತ್ತಿ ಭಿತ್ತಿಯಲ್ಲಿ

ಮೂಡಿದ ಚಿತ್ರಣದಿಂದ ಸಾಧ್ಯವಾಗುವಂಥದ್ದು ಅಳಿದು ಸುರಿಯದೆ ಕಣ್ಣಲ್ಲೇ ಇದರ ಸ್ವರೂಪವನ್ನು ನಿರ್ಣಯಸಿ ಅದಕ್ಕೆ ಅಂಟಿದ ಹೆಚ್ಚಿನ ತಿಗುಡನ್ನು ಬಾಚಿಯಿಂದ ಕೆತ್ತಿ ತೆಗೆಯುತ್ತಾನೆ"[೧]

ಮೂಲದ ಆಕಾರದಲ್ಲಿರುವ ಒಂದು ವಸ್ತುವಿನ ರೂಪವು ಬದಲಾವಣೆಯಾಗಬೇಕಾದರೆ, ಮುಖ್ಯವಾಗಿ ವೃತ್ತಿ ಮಾಡುವ ಬಡಿಗಿತನದ ಜ್ಞಾನದ ಅರಿವಿನ ಮೂಲಕ. ಆ ವಸ್ತುವಿನ ಆಕಾರವು ತನ್ನ ಕೆತ್ತನೆಯ ಸ್ವರೂಪದಲ್ಲಿ ವಿವಿಧ ರೂಪವನ್ನು ಪಡೆದುಕೊಳ್ಳುತ್ತದೆ. ಅಂದರೆ ಲೌಖಿಕ ಜ್ಞಾನದ ಅರಿವಿಗಿಂತ ಅಲೌಖಿಕ ವಾಸ್ತವ ಸ್ಥಿತಿಯನ್ನು ಕಂಡುಕೊಳ್ಳುವುದು ಇಲ್ಲಿ ಮುಖ್ಯವಾಗುತ್ತದೆ.

ಲೌಖಿಕ ಮತ್ತು ಅಲೌಖಿಕದ ಅರಿವಿನ ಪ್ರಜ್ಞೆ ಆ ವೃತ್ತಿ ಕಲೆಗಾರನಿಗೆ ಇರುವುದು ಅಗತ್ಯ. ಹೀಗೆ ಜ್ಞಾನದ ಅರಿವಿನ ಶೋಧದ ಹುಡುಕಾಟ ನಿಜ ಜೀವನದ ತಾರ್ಕಿಕ ಸಂವಾದ ಹಾಗೂ ತನ್ನ ನಡವಳಿಕೆ ಹಾಗೂ ಅಹಂಕಾರ ಇವುಗಳಲ್ಲಿರುವ ಬೇದ ಭಾವನೆಗಳನ್ನು ಕುರಿತು ಬಸವಯ್ಯ ತನ್ನ ವಚನಗಳಲ್ಲಿ ಚರ್ಚೆಗೆ ಒಳಪಡಿಸುತ್ತಾನೆ.

ಅಂತರಂಗ ಮತ್ತು ಬಹಿರಂಗ ಇವುಗಳಲ್ಲಿರುವ ನೀತಿ ಮತ್ತು ವ್ಯವಸ್ಥೆ ವಾಸ್ತವಾದ ಬದುಕಿನ ಒಪ್ಪಿತ ನೆಲೆಯಲ್ಲಿ ಸಮಾಜದ ಭಿನ್ನತೆಯನ್ನು ಬಸವಯ್ಯ ಬಹಿರಂಗ ಪಡಿಸುತ್ತಾನೆ. ಒಂದು ಒಪ್ಪಿತ ಸಮಾಜದಲ್ಲಿ ಆಚಾರ ವಿಚಾರ ಮತ್ತು ಅರಿವಿನ ಸಮಸ್ಯೆ ಈ ಪರಿಕಲ್ಪನೆಗಳು ಬಸವಯ್ಯನ ವಚನಗಳಲ್ಲಿ ವೈಚಾರಿಕ ನೆಲೆಯಾಗಿ ಈ ತಾರ್ಕಿಕದ ಜಡ ಸಂಗತಿಯನ್ನು ಗುರುತಿಸುತ್ತಾನೆ. ಇವುಗಳ ದ್ವಂದ್ವತೆಯ ಅರಿವನ್ನು ಕುರಿತು ಬಸವಣ್ಣ ಆಚಾರವೇ ಸ್ವರ್ಗ ಅನಾಚರವೇ ನರಕ ಎಂಬ ಪ್ರಾಮುಖ್ಯತೆಯನ್ನು ಕುರಿತು ಹೇಳುತ್ತಾನೆ.

ಇದು ಶಿಲ್ಪವನ್ನು ಕೆತ್ತಿದ ಕಲೆಗಾರನ ಮೂರ್ತಿ ರೂಪವನ್ನು ಕುರಿತು ವೈಚಾರಿಕ ಅರಿವನ್ನು ಮೂಡಿಸುತ್ತದೆ. ಈ ಅರಿವಿನ ಆಚಾರಕ್ಕೆ ಧಾರ್ಮಿಕ ಹಿನ್ನಲೆಯನ್ನು ಕಾಣುತ್ತೇವೆ. ಇಂತಹ ತಾತ್ವಿಕತೆಯನ್ನು ಬಾಚಿಕಾಯಕದ ಬಸವಯ್ಯನಲ್ಲಿ ಕಾಣುತ್ತೇವೆ.

"ಕಂಡುದ ಹಿಡಿಯಲೊಲ್ಲದೆ ಕಾಣದುದನರಿಸಿ ಹಿಡಿದಿಹೆನೆಂದರೆ ಸಿಕ್ಕದೆಂಬ ಬಳಕೆ ನೋಡಾ" ಎನ್ನುವಲ್ಲಿ ಸಾದೃಶ್ಯದಿಂದ ಅಸಾದೃಶ್ಯದ ಕಡೆಗೆ ಸಾಗಿ ಮತ್ತೇ ಸಾದೃಶ್ಯವನ್ನೇ ಕೊಡುವ ನಿಲುವು ಎದ್ದು ಕಾಣುತ್ತಿದೆ. ಇದನ್ನು ಬೇಕಾದರೆ ರೂಪ ನಿರೂಪ ಸ್ವರೂಪವೆಂದು ಗ್ರಹಿಸಬಹುದೆನಿಸುತ್ತದೆ"[೨]

ಹೀಗೆ ವೈಯಕ್ತಿಕವಾಗಿ ಸಮಾಜದಲ್ಲಿ ನೆಲೆಯೂರಿ ತನ್ನ ಅನುಭವದ ಸಾಧನೆಯ ಮೂಲಕ ಲೋಕ ಜ್ಞಾನದ ಅರಿವಿನ ವ್ಯವಹಾರ ಮತ್ತು ತರ್ಕದ ಮೂಲಕ ಕ್ರಿಯಾತ್ಮಕವಾಗಿ ಸಮರ್ಥಿಸಿಕೊಳ್ಳುತ್ತೇನೆ. ಕೇವಲ ಲೌಕಿಕಿ ಜ್ಞಾನದ ವ್ಯವಹಾರದ ಜೊತೆಗೆ ತನ್ನ ಇಂದ್ರಿಯ ಆಸಕ್ತಿಗಳ ಅರಿವಿನ ಹಾದಿಯನ್ನು ಬಸವಯ್ಯ ಅರ್ಥೈಸಿಕೊಳ್ಳುತ್ತಾನೆ.

ಬದುಕಲಿಕ್ಕೆ ಅನ್ನವು ಹೇಗೆ ಮುಖ್ಯವೋ ತನ್ನ ದೇಹದ ಸುಖದ ನಿರಾಕರಣೆಗಿಂತ ಸ್ವೀಕರಣೆಯ ತಾತ್ವಿಕ ದೃಷ್ಟಿಕೋನವು ಅಷ್ಟೇ ಮುಖ್ಯ ಪ್ರಮೇಯವನ್ನಾಗಿ ಮಂಡಿಸುವ ತಾತ್ವಿಕ ದೃಷ್ಟಿಯನ್ನು ಕಾಣುತ್ತೇವೆ.

"ಆರು ದರುಶನವೆಲ್ಲ ಎನ್ನ ಬಾಚಿಯ ಕಲೆ
ಮಿಕ್ಕಾದ ಮೀರಿದ ಅವದೂತರುಗಳೆಲ್ಲ
ಎನ್ನ ಉಳಿಯೊಳಗೂ ಒಡಪು
ಇಂತಿಹ ಮೀರಿ ಭೇದಿಸಿ ಭೇದಿಸಿಹೆನೆಂಬವರೆಲ್ಲ
ಎನ್ನ ಕೊಡತಿಯಲ್ಲಿ ಬಡೆಯಿಸಿ ಕೊಂಬುವ ಬಡಿಹೋರಿಗಳು
ಇಂತೀ ವಿಶ್ವಗೋಧರೆಲ್ಲರೂ
ಕರ್ತಾರನ ಕಮ್ಮಟದ ನಕ್ಕು ಬಚ್ಚನೆಯ ಚಿಕ್ಕಮಕ್ಕಳು
ಇಂತಿವನರಿದು ಕಾಮದಲಿ ಕರಗದೆ
ಕ್ರೋಧದ ದಳ್ಳುರಿಯಲ್ಲಿ ಬೇಯದೆ
ನಾನಾ ವ್ಯಾಮೋಹ ಋತುಕಾಲಂಗಳ
ಕಾಹಿನ ಬಲೆಗೊಳಗಾಗುತ್ತ
ಮತ್ತೆ ಸಾವಧಾನವೇ ಮತ್ತೆಯೂ ಜ್ಞಾನಾತೀತವೆ.
ಮತ್ತೆ ಧ್ಯಾನ ಮೂರ್ತಿಯೆ ಮತ್ತೆ ನಾನಾ ಶ್ರೀಯಲ್ಲಿ ಭಾವ ವ್ಯವಧಾನವೇ
ಮತ್ತೆ ಗುರುಚರ ಪರವೆ, ಒಕ್ಕುಡಿತೆ ನೀರಿನಲ್ಲಿ ತಾ ಸತ್ತ
ಮತ್ತೆ ಸಮುದ್ರವೆಷ್ಟಾಳವಾದರೇನು
ಕಿಂಚಿತ್ತು ಸುಖದಲ್ಲಿ ಲಿಂಗವ ಬಿಟ್ಟು
ಅಂಗನೆಯರುಸ್ಥಲದಲ್ಲಿ ಅಂಗೀಕರಿಸಿ
ಅವರಧರ ಪಾನಂಗಳಮಾಡಿ ನಾಲಿಂಗಾಂಗಿಯೆಂದಡೆ
ಸರ್ವಸಂಗ ಪರಿತ್ಯಾಗವ ಮಾಡಿದ ಲಿಂಗಾಂಗಿಗಳೊಪ್ಪರು
ಬಸವಣ್ಣ ಪ್ರಿಯ ವಿಶ್ವಕರ್ಮಟಕ್ಕೆ ಕಾಳಿಕಾ ವಿಮಲ ರಾಜೇಶ್ವರ
ಸ್ವಪ್ನದಲ್ಲಿ ಕುರುಹುಗಾಣಿಸಿಕೊಳ್ಳಾ"[೮]

ಮನುಷ್ಯ ಎಂದ ಮೇಲೆ ಸಹಜವಾಗಿ ಕ್ರೌರ್ಯ, ಮೋಹ, ಮದ, ಮತ್ಸರ, ಲೋಭ ಎಂಬ ಗುಣಗಳು ಸಹಜವಾಗಿ ಕಾಣುತ್ತವೆ. ಅವುಗಳಂತೆ ನಡೆಯುವವನು ಎಡುವುವರೆ

ಕುಳಿತುಕೊಂಡವನು ಎಡವಲು ಸಾಧ್ಯವಿಲ್ಲ. ಅದರಂತೆ ನುಡಿಯಲ್ಲಿ ಎಚ್ಚರವಿರಲಿ. ನಡೆಯಲ್ಲಿ ತಪ್ಪಿದರೆ ಹಿಡಿದಿದು ಲಿಂಗ ಘಟಸರ್ಪ ಎನ್ನುವ ಬಸವಣ್ಣನ ಮಾತು ದೇಹ ಮತ್ತು ಮನಸ್ಸಿನ ಅರಿವಿನ ಶಕ್ತಿಯ ಆಶಾವಾದವನ್ನು ದೈಹಿಕ ವ್ಯಾಮೋಹವನ್ನು ಕಾಣುತ್ತೇವೆ.

ಮೇಲೆ ಉಲ್ಲೇಖವಾಗಿರುವ ಬಸವಯ್ಯನ ವಚನದಲ್ಲಿ ಅರಿಷಡ್ ದರುಶನಗಳನ್ನು ಪರಿಚಯಿಸಿಕೊಳ್ಳಲಾಗಿದೆ. ಅರಿಷಡ್ವರ್ಗಗಳೆಂದರೆ ವೇದ, ಉಪನಿಷತ್ತುಗಳು, ಪುರಾಣಗಳು, ಅವಧೂತರು, ಶರಣರು, ನಿರಂಕುಶ ಪ್ರಭುತ್ವ, ಬೌದ್ಧಿಕ ವರ್ಗ ಮುಂತಾದವರು ಹೇಳುವ ದಲಿತರೆ ಸಾಮಾನ್ಯ ವರ್ಗದ ವೃತ್ತಿ ಕಾಯಕದ ಜೀವಿಗಳ ಶೋಷಣೆ ಇವೆಲ್ಲವುಗಳ ವೈಧಾನಿಕ ನೆಲೆಗಳನ್ನು ಬಸವಯ್ಯನು ಬಾಚಿ ಮತ್ತು ಉಳಿ ಇವೆರಡರ ರೂಪಕದೊಂದಿಗೆ ತಾತ್ವಿಕ ನೆಲೆಗಟ್ಟುಗಳನ್ನು ಹಿಡಿದಿಟ್ಟಿರುವುದು ಅರ್ಥ ಪೂರ್ಣವೆನಿಸುತ್ತದೆ. ಇಂತಹ ಒಂದು ಶಕ್ತಿ ಬಾಚಿಯೊಳಗಿನ ಕಲೆ ನಿಜ ಜೀವನದ ಕಲಾತ್ಮಕ ವೈಚಾರಿಕ ನೆಲೆಗಟ್ಟಿನಲ್ಲಿ ರೂಪ ನಿರೂಪಕ ಅಂಶಗಳ ಬದುಕಿನ ವಾಸ್ತವತೆಯನ್ನು ಕಟ್ಟಿಕೊಡಲಾಗಿದೆ.

ಒಂದು ಕಾಡಿನ ಕಟ್ಟಿಗೆಯನ್ನ ಕೆತ್ತಿ ಹೂಗಲು ತೆಗೆದು ಸದ್ಭಕ್ತರಿಗೆ ಮನೆ ನಿರ್ಮಾಣ ಮಾಡುವ ಒಂದು ಕಲಾ ಪ್ರವೃತ್ತಿಯ ಮೂಲಕ ಸೇವೆಗೈಯ್ಯುವ ಹಾಗೂ ಜಂಗಮನಂತೆ ಅಲೆಯುವ ಕ್ರಿಯಾಸರಣಿಯುಳ್ಳ ವ್ಯಕ್ತಿತ್ವದವನು ಈತನ ಬಾಚಿಯ ಬಳಕೆ, ಶಕ್ತಿಯ ತಾತ್ವಿಕತೆ ಇಲ್ಲಿ ಪ್ರಮುಖವಾಗಿವೆ.

ಇಂತಹ ಕಲಾನುಭವ ಬಸವಯ್ಯನ ಬಾಚಿ ಮತ್ತು ಉಳಿಯಲ್ಲಿರುವಂತಹ ಒಂದು ಶಕ್ತಿಯು ಕಟ್ಟಿಗೆಯೊಳಗಿನ ಮೂರ್ತಿಯನ್ನು ಜ್ಞಾನ ಎಂಬ ಚಿತ್ರದಲ್ಲಿ ಕೆತ್ತಿ ನಯವಾಗಿ ಒಂದು ಆಕೃತಿಯ ರೂಪವನ್ನು ಕೊಡುವ ಗ್ರಹಿಕೆಯನ್ನು ನೋಡಬಹುದು.

ಒಂದು ಕಾಡಿನ ಕಟ್ಟಿಗೆಯನ್ನು ಸುಂದರವಾದ ಆಕೃತಿ ನಿರ್ಮಾಣ ಮಾಡಬೇಕಾದರೆ ಮೊದಲು ಶಕ್ತಿ ಮತ್ತು ಯುಕ್ತಿ ಇವೆರಡರ ಸಮ್ಮಿಲನವಿರಬೇಕು ಹಾಗೆ ತನ್ನ ಶುದ್ಧವಾದ ಮನಸ್ಸಿನ ಏಕಾಗ್ರತೆಯ ಮೂಲಕ ಬಾಚಿಕಾಯಕದ ಬಸವಯ್ಯ ಬಾಚಿ ಮತ್ತು ಉಳಿ ಈ ಎರಡು ಆಕಾರಗಳಿಂದ ಮೂಲ ಸ್ವರೂಪದಿಂದ ಒಂದು ಕಲಾ ಸ್ವರೂಪದೆಡೆಗೆ ಕೊಂಡೊಯ್ಯುವ ತಿಳಿವಳಿಕೆ ಮುಖ್ಯ ಬಸವಯ್ಯನ ವಚನದ ವೈಶಿಷ್ಟ್ಯವೇನೆಂದರೆ ಗಳಿಕೆ ಮುಖ್ಯವಲ್ಲ ಪರೋಪಕಾರದ ನೆಲೆ ಅತೀ ಅವಶ್ಯಕವಾದದ್ದು ಸಕಲ ಸಿದ್ಧಿಯನ್ನು ಪಡೆಯಬೇಕಾದರೆ ಪ್ರೀತಿ ವಿಶ್ವಾಸ ಇವುಗಳ ಜೊತೆಗೆ ಸತ್ಕರ್ಮ ಮಾರ್ಗವನ್ನು ಅನುಸರಿಸಬೇಕು ಎಂಬ ಗುರಿ ಬಸವಯ್ಯನ ವಚನಗಳ ತಾತ್ವಿಕತೆಯಾಗಿದೆ.

ಬಸವಯ್ಯನ ವಚನಗಳಲ್ಲಿ ಕರ್ಮಮಾರ್ಗವನ್ನು ಎತ್ತಿ ಹಿಡಿಯಬಹುದಾಗಿದೆ. ಏಕೆಂದರೆ ಪೂಜೆ ನಿಯಮ, ವ್ರತ, ಆಚರಣೆ ಇವುಗಳಿಗಿಂತ ಮುಖ್ಯ ಕರ್ತವ್ಯವೇ ಪ್ರಮುಖವಾದದ್ದು

ಎಂಬ ಮನೋಧರ್ಮ ಸಿದ್ಧರಾಮನದು. ಪರಂಪರೆಯಾಗಿ ದುಡಿಯುವ ಶ್ರಮಿಸುವ ವೃತ್ತಿಗಳು ಆತ್ಮ ಉದ್ಧಾರದ ದಾರಿಗಳಲ್ಲ ಎಂಬ ಮಾತು ಅತೀ ಮುಖ್ಯ. ಇದರ ತಾತ್ವಿಕತೆ ಕುರಿತು ಬಸವಯ್ಯ ಮತ್ತು ಸಿದ್ಧರಾಮನು ಕರ್ತವ್ಯ ಪ್ರಜ್ಞೆಯ ಕಾಯಕದ ಅರಿವನ್ನು ಮೂಡಿಸುತ್ತಾರೆ.

"ಬಾಚಿಕಾಯಕದ ಬಸವಯ್ಯನಿಗೆ ಉಳಿ, ಬಾಚಿ, ಕೊಡತಿ, ಇಮಾರತಿಗಳು ಮುಖ್ಯವಾದರೆ ಸಿದ್ಧರಾಮನಿಗೆ ಹಾರಿ, ಗುದ್ದಲಿ, ಸಲಿಕೆ ಕೆರಕಟ್ಟೆಗೆಗಳು ಮುಖ್ಯವಾಗುತ್ತದೆ. ಇವು ಇಚ್ಚಾಶಕ್ತಿ, ಜ್ಞಾನಶಕ್ತಿ, ಕ್ರಿಯಾಸಕ್ತಿಗಳ ಪ್ರತೀಕಗಳು"[೯]

ಈ ಕಾಯಕದಲ್ಲಿ ದುಡಿಯುವವರ ಮನೋಧರ್ಮ, ಪರೋಪಕಾರದ ಅರಿವು, ಅಗತ್ಯ ಬೌದ್ಧಿಕ ಜ್ಞಾನ ಇವಕ್ಕಿಂತ ತಿಳಿವಳಿಕೆ ಜೀವನದಲ್ಲಿ ಮುಖ್ಯವಾಗುತ್ತದೆ. ಅಲ್ಲದೆ ಶರೀರ ಕ್ರಿಯಾಶೀಲವುಳ್ಳ ಪ್ರವೃತ್ತಿ ಪರ ವಿಚಾರಕ್ಕಿಂತ ನಿವೃತ್ತ ಪರ ವಿಚಾರಧಾರೆ ಬಸವಯ್ಯ ಮತ್ತು ಸಿದ್ಧರಾಮನ ವಚನಗಳ ತಾತ್ವಿಕತೆಯಲ್ಲಿ ಕಾಣುತ್ತೇವೆ.

ಒಟ್ಟಿನಲ್ಲಿ ಇವರಿಬ್ಬರ ವಚನಗಳ ತಾತ್ವಿಕತೆ ಮಾನವನ ಉದ್ಧಾರಕ್ಕಾಗಿ ಮತ್ತು ಮೋಕ್ಷ ಸಾಧನೆಯತ್ತ ಕೊಂಡೊಯ್ಯುತ್ತದೆ. ಪರೋಪಕಾರದ ಕರ್ಮಮಾರ್ಗದ ನೆಲೆ ಜನ ಹಿತಕ್ಕಾಗಿಯೇ ಶ್ರಮಿಸುವ ವೈಚಾರಿಕ ನೆಲೆಯನ್ನು ರೂಪಿಸುತ್ತದೆ.

ಧಾರ್ಮಿಕ ಸಾಮಾಜಿಕ ಮತ್ತು ಸಂಸ್ಕೃತಿಯು ಬದುಕಿನ ಜೀವನವನ್ನು ದುಂಡಾಗಿ ಗ್ರಹಿಸದೆ ಸಾಂಸ್ಕೃತಿಕ ಪರಂಪರೆ ಮುಖಾಮುಖಿಯಾಗಿ ಗ್ರಹಿಸಲಾಗಿದೆ.

ಬಸವಯ್ಯನ ವಚನಗಳ ತಾತ್ವಿಕ ಮೀಮಾಂಸೆಯು ಭಾರತೀಯ ಕಾವ್ಯಮೀಮಾಂಸೆಯ ರಸ ಸಿದ್ಧಾಂತದೆಡೆಗೆ ವೈಭವೀಕರಿಸಲಾಗಿದೆ. ರಸಸಿದ್ಧಾಂತ ಮತ್ತು ಶೃಂಗಾರ ರಸ ಇವೆರಡರ ಸಂಬಂಧ ಅಂತರ್ಗತವಾದುದು ಶೃಂಗಾರ ರಸವು ಭಕ್ತಿ ರಸಕ್ಕೆ ಮೂಲ ಎಂಬ ಮಾಹಿತಿಯನ್ನು ಎತ್ತಿಕೊಂಡಾಗ ಹಲವು ದ್ವಂದ್ವಗಳಿಗೆ ಸ್ಪಷ್ಟತೆಯನ್ನು ನೀಡುತ್ತವೆ. ದೇಹ ಸ್ಥಿತಿಯು ನಮ್ಮ ಮನಸ್ಸಿನ ಭಾವನೆಗಳಿಗೆ ಸ್ಪಂದಿಸುತ್ತವೆ. ಆದರೆ ಕಾವ್ಯದ ರಸಾನುಭಾವಕ್ಕೆ ಲೌಕಿಕದ ವಾಸ್ತವತೆಯನ್ನು ಕುರಿತು ಸ್ವಾನಾನುಭಾವದ ಸಂಕೇತಿಕ ವ್ಯವಸ್ಥೆಯಲ್ಲಿ ರಸ ಸ್ವಾಧನೆಗೈಯುತ್ತಾರೆ.

**ಅಡಿ ಟಿಪ್ಪಣಿಗಳು**

೧. ಡಾ. ವೀರೇಶ ಬಡಿಗೇರ(ಸಂ) ಬಾಚಿಕಾಯಕದ ಬಸವಯ್ಯ ವೃತ್ತಿ ಹಾಗೂ ತತ್ವ ಮೀಮಾಂಸೆ, ಪುಟ–೩

೨. ಅದೇ, ಪುಸ್ತಕ, ಪುಟ–೩೪

೩. ಅದೇ, ಪುಸ್ತಕ, ಪುಟ–೩೫

೪. ಅದೇ, ಪುಸ್ತಕ, ಪುಟ–೩೭

೫. ಅದೇ, ಪುಸ್ತಕ, ಪುಟ–೩೮

೬. ಅದೇ, ಪುಸ್ತಕ, ಪುಟ–೪೧

೭. ಅದೇ, ಪುಸ್ತಕ, ಪುಟ–೪೨

೮. ಅದೇ, ಪುಸ್ತಕ, ಪುಟ–೪೩

೯. ಅದೇ, ಪುಸ್ತಕ, ಪುಟ–೪೬,

# ಅಧ್ಯಾಯ : ಮೂರು

# ಬಾಚಿಕಾಯಕದ ಬಸವಯ್ಯ ಇತರ ಆಯ್ದ ವಚನಕಾರರು

೩.೧. ಬಸವಣ್ಣ

೩.೨. ಹಾವಿನಹಾಳ ಕಲ್ಲಯ್ಯ

೩.೩. ಕಾಮಾಟದ ಭೀಮಣ್ಣ

೩.೪. ಕೊಂಡೆಯ ಮಂಚಣ್ಣ

೩.೫. ಮಾದಾರ ಚನ್ನಯ್ಯ

# ಅಧ್ಯಾಯ : ಮೂರು

# ಬಾಚಿಕಾಯಕದ ಬಸವಯ್ಯ ಮತ್ತು ಇತರ ಆಯ್ದ ವಚನಕಾರರು

ಹನ್ನೆರಡನೆಯ ಶತಮಾನದಲ್ಲಿ ಬಾಚಿಕಾಯಕದ ಬಸವಯ್ಯನ ಜೊತೆಗೆ ಹಲವು ವಚನಕಾರರು ಇದ್ದರು. ಅವರೂ ಕೂಡ ಇವನಂತೆ ವಿವಿಧ ಕಾಯಕ ವೃತ್ತಿ ಮಾಡುತ್ತಿದ್ದರು. ಒಬ್ಬೊಬ್ಬರು ಒಂದೊಂದು ಕಾಯಕವನ್ನು ಅಳವಡಿಸಿಕೊಂಡು ಜೀವನ ನಡೆಸುತ್ತಿದ್ದರು.

ತಮ್ಮ ಕಾಲದ ಸಾಮಾಜಿಕ ಸ್ಥಿತ್ಯಂತರಗಳನ್ನು ಕಂಡು ಪ್ರತಿಯೊಬ್ಬ ವಚನಕಾರರು ತನ್ನದೇ ಆದ ರೀತಿಯಲ್ಲಿ ಪ್ರತಿಕ್ರಿಯೆ ತೋರಿದ್ದಾರೆ. ಕೆಳಜಾತಿಯ ಅಸ್ಪೃಶ್ಯ ಜನಾಂಗದ ಮತ್ತು ದಲಿತ ವರ್ಗದ ಮುಂತಾದ ಜಾತಿಗೂ ತಲುಪುವಂತೆ ಇವರ ವಚನದ ಸ್ವರೂಪ ಹರಡಿತು. ಹೀಗಾಗಿ ಬಾಚಿಕಾಯಕದ ಬಸವಯ್ಯನೊಂದಿಗೆ ಸಮಕಾಲೀನ ಶರಣರ ಅಭಿವ್ಯಕ್ತಿಯ ನೆಲೆಗಳನ್ನು ಗುರುತಿಸಿಕೊಳ್ಳುವ ಮೂಲಕ ಅಧ್ಯಯನಕ್ಕೆ ಬೇಕಾದ ತಾತ್ವಿಕ ಜರೂರನ್ನು ಈ ಅಧ್ಯಾಯದಲ್ಲಿ ಗುರುತಿಸಿಕೊಳ್ಳಲಾಗಿದೆ.

ಬಸವಣ್ಣ, ಹಾವಿನಹಾಳ ಕಲ್ಲಯ್ಯ, ಕಾಮಾಟದ ಭೀಮಣ್ಣ, ಕೊಂಡೆಯ ಮಂಚಣ್ಣ, ಮಾದಾರ ಚೆನ್ನಯ್ಯ ಇವರ ಕಾಯಕದ ನಿಷ್ಠೆ ಜಿಜ್ಞಾಸೆಗಳು ಸ್ವಾವಲಂಭಿತನ ವೈಚಾರಿಕ ನಿಲುವುಗಳನ್ನು ಈ ಅಧ್ಯಾಯದಲ್ಲಿ ತಿಳಿಸುವ ಯತ್ನವಾಗಿದೆ.

## ೩.೧. ಬಸವಣ್ಣ

ಕನ್ನಡ ನಾಡಿನ ಇತಿಹಾಸ ದೊಡ್ಡದು. ಭವ್ಯ ಇತಿಹಾಸವನ್ನು ಹೊಂದಿರುವ ಈ ನಾಡಿನಲ್ಲಿ ಆಗಿಹೋದ ಮಹಾಪುರುಷರು ಹಲವರು. ಇವರಲ್ಲಿ ವಿಶ್ವಬಂಧು ಬಸವಣ್ಣನವರೂ ಒಬ್ಬರು ಬಸವಣ್ಣನವರು ತಮ್ಮ ಜೀವಿತದ ಕಾಲದಲ್ಲಿ ಸಾಧಿಸಿದ್ದು ಅಪಾರ. ಅವರ ಜೀವನ ಒಂದು ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿರದೆ ಹಲವು ಕ್ಷೇತ್ರಗಳಲ್ಲಿ ಹರಿದು ಕನ್ನಡ ನಾಡು ಹೆಮ್ಮೆಯಿಂದ ಹೇಳಿಕೊಳ್ಳಬಹುದಾದ ಮಹಾಪುರುಷನ ಉದಯಕ್ಕೆ ಅವಕಾಶವಾಯಿತು.

ಇಂದಿನ ಬಿಜಾಪುರ ಜಿಲ್ಲೆಯ ಬಾಗೇವಾಡಿ ಎಂಬ ಊರು ಬಸವಣ್ಣನವರ ಜನ್ಮ ಸ್ಥಳ. ಇದನ್ನು ಬಸವನ ಬಾಗೇವಾಡಿ ಎಂದು ಕರೆಯುತ್ತಾರೆ. ಇಲ್ಲಿ ಹಿಂದೆ ಸುಮಾರು ಹನ್ನೆರಡನೆಯ ಶತಮಾನದಲ್ಲಿ ಮಾದಿರಾಜ ಮತ್ತು ಮಾದಲಾಂಬಿಕೆ ಎಂಬ ದಂಪತಿಗಳಿದ್ದರು. ಇವರಿಗೆ

ಬಹುಕಾಲ ಮಕ್ಕಳಿರಲಿಲ್ಲ ಮಾದಲಾಂಬಿಕೆ ದೈವಭಕ್ತಳು. ಮಕ್ಕಳಾಗಲೆಂದು ಹಲವಾರು ವ್ರತಗಳನ್ನು ಕೈಗೊಂಡಳು. ನಂದಿ ವ್ರತ ಮಾಡಿದುದರ ಫಲವೋ ಏನೋ ಆಕೆಗೆ ಗಂಡು ಮಗುವಾಯಿತು. ಮಗುವಿಗೆ ಬಸವ ಎಂದೇ ಹೆಸರಿಟ್ಟರು. ದಂಪತಿಗಳ ಈ ಮಗುವೇ ಮುಂದೆ ಎಲ್ಲರಿಗೂ ಬೇಕಾದ ಬಸವಣ್ಣ ಎಂದು ಖ್ಯಾತವಾಯಿತು. ಬಸವಣ್ಣ ಬಾಲ್ಯದಿಂದಲೇ ಬುದ್ಧಿವಂತರು ಅಷ್ಟೇ ಅಲ್ಲ ತುಂಬಾ ಸೂಕ್ಷ್ಮ ಬುದ್ಧಿಯುಳ್ಳವರಾಗಿದ್ದರು. ಒಂದು ದಿನ ಬಸವಣ್ಣ ದೇವಾಲಯವೊಂದರ ಹೊರಗೆ ಹರಕು ಬಟ್ಟೆ ತೊಟ್ಟಿದ್ದ ಒಬ್ಬನನ್ನು ಕಂಡರು. ಅವನನ್ನು ದೇವಸ್ಥಾನದೊಳಗಡೆ ಬಿಡಲಿಲ್ಲ. ಅವನು ಅಸ್ಪೃಶ್ಯನೆಂದು ದೂರವಿಟ್ಟಿದ್ದರು. ನೋಡಲು ಅಪ್ಪಣೆ ಬೇಕೆ ಎನಿಸಿತು, ಅವರಿಗೆ. ಬಸವಣ್ಣನವರಿಗೆ ಸುಮಾರು ಎಂಟು ವರ್ಷ ವಯಸ್ಸಾದಾಗ ತಂದೆ ಅವರಿಗೆ ಉಪನಯನ ಮಾಡಲು ಮುಂದಾದರು. ಹಸೆಮಣೆ ಮೇಲೆ ಕುಳಿತು ಮಗನಿಗೆ ಜನಿವಾರ ತೊಡೆಸಲು ಹೋದಾಗ ಬಸವಣ್ಣ ಈ ಧಾರವನ್ನೇಕೆ ಧರಿಸಬೇಕು ಎಂದು ಕೇಳಿದರು. ಇದು ಪವಿತ್ರ ಜನಿವಾರ ಇದನ್ನು ಧರಿಸುವುದು ನಮಗೆ ಗೌರವ ಎಂದರು ತಂದೆ. ಇಂತಹ ಅರ್ಥವಿಲ್ಲದ ಗೌರವ ನನಗೆ ಬೇಡಪ್ಪ ಎಂದು ಬಸವಣ್ಣ ಎದ್ದೇ ಬಿಟ್ಟರು. ಅವರಿಗೆ ಈಶ್ವರನದೇ ಧ್ಯಾನ ಕೂಡಲ ಸಂಗಮದೇವನ ಪ್ರಾರ್ಥನೆ ಒಂದೇ ಸಾಕು ಎಂದರು.

ಸಕಲ ಪ್ರಾಣಿಗಳಲ್ಲೂ ದಯ ಇಡಬೇಕು ಅಹಂಕಾರ ಬಿಡಬೇಕು ಎಂದು ಬೋಧಿಸಿದರು. ಅವರ ಜೀವದಯೆ ಸರ್ವರಲ್ಲೂ ಸಮಾನತೆ ಹಾಗೂ ಒಳ್ಳೆಯ ನಡತೆಗಳನ್ನು ಕಂಡ ಅನೇಕರು ಅವರನ್ನು ಅನುಸರಿಸ ತೊಡಗಿದರು. ಚಮ್ಮಾರನಾಗಿದ್ದ ಹರಳಯ್ಯ, ಅಗಸ ಮಾಚಯ್ಯ, ಅಂಬಿಗರ ಚೌಡಯ್ಯ ಈ ಮೊದಲಾದವರು ಬಸವಣ್ಣನವರ ಅನುಯಾಯಿಗಳಾದರು. ಬಸವಣ್ಣನವರು ಎಲ್ಲಾ ಜಾತಿಯವರು ಒಂದೇ. ಜಾತಿ ಬೇದ ಮಾಡುವುದು ತರವಲ್ಲ ಎಂದು ಹೇಳುತ್ತಿದ್ದರು. ವಿವಿಧ ಜಾತಿಗಳ ಕೂಟ ನಡೆವಾಗ ಕೆಲವು ಬ್ರಾಹ್ಮಣರು ಸಿಟ್ಟಿಗೆದ್ದರು. ಬಸವಣ್ಣನವರು ನಮ್ಮ ಪದ್ಧತಿಗಳನ್ನು ಬುಡಮೇಲು ಮಾಡುತ್ತಿದ್ದಾರೆ. ಇವರನ್ನು ಹೀಗೆಯೇ ಬಿಟ್ಟರೆ ನಾವೆಲ್ಲ ಉಳಿಯಲು ಆಗುವುದಿಲ್ಲ ಎಂದುಕೊಂಡರು. ಬಿಜ್ಜಳ ದೊರೆಯಲ್ಲಿ ದೂರು ತಂದರು. ಬಿಜ್ಜಳ ಬಸವಣ್ಣನವರನ್ನು ಕರೆಸಿ ವಿಚಾರಣೆ ನಡೆಸಿದರು. ಅರಮನೆಯ ಹಣವನ್ನು ಪ್ರತಿನಿತ್ಯ ಮನೆಯಲ್ಲಿ ನಡೆಸುತ್ತಿರುವ ಭೋಜನದ ಖರ್ಚಿಗಾಗಿ ಬಳಸುತ್ತಿದ್ದರೆಂದು ನಿಮ್ಮ ಮೇಲೆ ಆಪಾದನೆ ಇದೆ ಇದು ನಿಜವೇ ಎಂದು ದೊರೆ ಕೇಳಿದರು. ಬಸವಣ್ಣ ಅದು ನಿಜವಿದ್ದರೆ ಯಾವ ಶಿಕ್ಷೆ ಬೇಕಾದರೂ ನೀಡಬಹುದು ಎಂದು ಬಿಟ್ಟರು. ಬಿಜ್ಜಳರು ಬೊಕ್ಕಸದ ಹಣವನ್ನು ಎಣಿಸಿ ಬರಲು ಹೇಳಿದರು. ಬೊಕ್ಕಸದ ಲೆಕ್ಕ ಸರಿಯಾಗಿಯೇ ಇತ್ತು. ಬಸವಣ್ಣ ತಪ್ಪಿತಸ್ಥರಲ್ಲ ಎಂಬುದು ದೃಢ ಪಟ್ಟಿತು. ಬಿಜ್ಜಳ ಬಸವಣ್ಣನವರಲ್ಲಿ ಕ್ಷಮೆಯಾಚಿಸಿದರು. ಬಸವಣ್ಣನವರ ಕೀರ್ತಿ ಎಲ್ಲೆಡೆಗೂ ಹಬ್ಬಿತು.

ಬಸವಣ್ಣ ತಾವು ನಂಬಿಕೊಂಡ ತತ್ವಗಳನ್ನು ಪ್ರತಿ ಪಾದಿಸುವುದಕ್ಕಾಗಿ ವೀರಶೈವ ಮತವನ್ನು ಸ್ಥಾಪಿಸಿದರು. ಅನ್ಯ ಜಾತಿಯವರನ್ನು ತಮ್ಮ ಮತಕ್ಕೆ ಸೇರಿಸಿಕೊಂಡರು. ಅದಕ್ಕೆ ಕುರುಹಾಗಿ ಲಿಂಗಧಾರಣೆ ಮಾಡಿಸಿದರು. ತಾವೂ ಸಹ ಎಲ್ಲರೊಡನೆ ಬೆರೆತು ನಾವೆಲ್ಲ ಶಿವನ ಮಕ್ಕಳು ಶರಣರು ಎಂದು ಹೇಳಿದರು.

ಬಸವಣ್ಣನವರು ಅಧ್ಯಾತ್ಮಿಕ ಅನುಭವವನ್ನು ಪಡೆದ ಮಹಾಶರಣರು. ಒಮ್ಮೆ ಒಂದಷ್ಟು ಜನ ನಾಗರ ಹಾವನ್ನು ಕೋಲು ತೆಗೆದುಕೊಂಡು ಬಡಿಯುತ್ತಿದ್ದರು. ಬಸವಣ್ಣನವರು ತಡೆದು ನಿಲ್ಲಿಸಿ, ಅಯ್ಯಾ ಕಲ್ಲ ನಾಗರ ಕಂಡರೆ ಹಾಲು ಸುರಿಯುತ್ತೀರಿ, ಆದರೆ ನಿಜವಾದ ಹಾವನ್ನು ಕಂಡರೆ ಬಡಿದು ಕೊಲ್ಲುತ್ತೀರಿ ಇದು ಸರಿಯೇ ಎಂದರು.

ಇನ್ನೊಮ್ಮೆ ಕಟುಕರಿಬ್ಬರು ಬಲಿಕೊಡಲೆಂದು ಕುರಿಮರಿಯನ್ನು ಕೊಲ್ಲ ಹೊರಟ್ಟಿದ್ದರು. ಬಸವಣ್ಣ ಅವರಿಗೆ ತಿಳುವಳಿಕೆ ಹೇಳಿ ದಯಬೇಕು ಧಯಯೇ ಧರ್ಮದ ಮೂಲವಯ್ಯಾ ಕುರಿ ಮರಿ ಬಿಟ್ಟು ಬಿಡಿ ಎಂದರು.

ಬಸವಣ್ಣ ಮೇಲು ಕೀಳು ಎಂಬ ತಾರತಮ್ಯವನ್ನು ತೊರೆದು ಹಾಕಲು ಶ್ರಮಿಸಿದರು. ಮಹಾಯೋಗ ಎನ್ನುವಂತೆ ಮಧುವರಸರ ಮಗಳು ಚಮ್ಮಾರ ಹರಳಯ್ಯನ ಮಗನನ್ನು ಮದುವೆಯಾಗಲು ಬಯಸಿದಾಗ ಬಸವಣ್ಣ ಆ ಮದುವೆ ಮಾಡಿಸಿದರು. ಈ ಅಂತರ್ಜಾತಿಯ ವಿವಾಹ ಅಪರಾಧ ಎಂದು ಹಲವರು ಬಸವಣ್ಣನವರಿಗೆ ಎದುರಾದರು. ದೊರೆಯತನಕ ಹೋಯಿತು. ದೊರೆ ಬಸವಣ್ಣನವರ ವಿಚಾರಗಳನ್ನು ಒಪ್ಪಿದರೂ ಈ ವಿವಾಹ ಮಾಡಿಸಿದುದು ಸರಿ ಎಂದೂ ತೋರಲಿಲ್ಲ. ಶಿವನ ದೃಷ್ಟಿಯಲ್ಲಿ ಮಾನವರೆಲ್ಲ ಒಂದೇ ಪದ್ಧತಿ ಅನಿಷ್ಠ ಎಂದು ಬಸವಣ್ಣ ಹೇಳಿದರು.

"ಅಯ್ಯಾ ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ
ಮೀನಜ, ರೋಮಜ ಮಹಾಮುನಿಗಳ ಲಯವ ನೋಡಿದುದ ನಾ ಬಲ್ಲೆನಾಗಿ
ಅಯ್ಯಾ ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯ, ನವಕೋಟಿ ಬ್ರಹ್ಮರಿಗೆ
ಪ್ರಳಯವ ಮಾಡುವುದು ಬಲ್ಲೆನಾಗಿ ಅಯ್ಯಾ
ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ
ದಶಕೋಟಿ ನಾರಾಯಣರಿಗೆ ಮರಣವ ಮಾಡುವದು ನಾ ಬಲ್ಲೆನಾಗಿ
ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ
ಅನಂತಕೋಟಿ ರುದ್ರರಿಗೆ ಲಯವ ಮಾಡುವುದ ನಾ ಬಲ್ಲೆನಾಗಿ ಅಯ್ಯಾ
ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ
ಎನ್ನನೇಳೇಳು ಭವಕ್ಕೆ ತಂದಲ್ಲಿ ಅನುಭಯಲಿಂಗ, ಜಂಗಮದ

ಮೊರೆ ಹೊಕ್ಕು ಭವಂ ನಾಸ್ಥಿಯಾಗಿ ಬದುಕಿದೆನಯ್ಯಾ ಕೂಡಲ ಸಂಗಮದೇವಾ"[1]

ನಿನ್ನನ್ನು ದೇವರೆಂದು ನಂಬಿ ಪೂಜಿಸಲಾಗದು ಏಕೆಂದರೆ ನೀನು, ಮೀನುಗಳಿಂದ, ಬೆವರಿನಿಂದ, ಹುಟ್ಟಿದವರನ್ನು ಒಂಭತ್ತುಕೋಟಿ ಜನ ಬ್ರಹ್ಮರನ್ನು, ಹತ್ತು ಕೋಟಿ ಜನ ನಾರಾಯಣವನ್ನು, ಅನಂತ ಕೋಟಿ ರುದ್ರರನ್ನು ನಾಶ ಮಾಡಿರುವುದನ್ನು ತಾನು ಚೆನ್ನಾಗಿ ಬಲ್ಲೆನು. ಅಲ್ಲದೆ ನನ್ನನ್ನು ಏಳೇಳು ಸಲ ಈ ಭವಕ್ಕೆ ತಂದಾಗಲೂ ನಾನೂ ಲಿಂಗ-ಜಂಗಮದ ಮೊರೆಹೊಕ್ಕ ಕಾರಣದಿಂದಲೇ ನನ್ನ ಭವವು ನಾಸ್ತಿಯಾದದ್ದು, ನಾಶವಾದದ್ದು ನನಗೆ ಚೆನ್ನಾಗಿ ಗೊತ್ತಿದೆ. ಅಂದಾಗ ನಿನ್ನನ್ನು ದೇವರೆಂದು ನಂಬಿ ಪೂಜಿಸಿ ಫಲವೇನು.

"ಜಂಗಮದ ಸನ್ನಿಧಿಯಲ್ಲಿ ನಾನು ವಾಹನವನೇರಲಮ್ಮೆ
ಏರಿದರೆ ಭವ ಹಿಂಗದು ಅದೇನು ಕಾರಣ?
ಮುಂದೆ ಸೂಲವನೇರುವ ಕಾರಣ। ಜಂಗಮು ಬದಲಾಸನದಲ್ಲಿರಲೆಮ್ಮೆ
ಇದ್ದರೆ ಭವ ಹಿಂಗದು, ಏನು ಕಾರಣ
ಮುಂದೆ ಕಾಯ್ದಿಟ್ಟಿಗೆಯ ಮೇಲೆ ಕುಳ್ಳಿರಿಸುವ ಪ್ರಾಪ್ತಿಯುಂಟಾದ
ಕಾರಣ, ಜಂಗಮದ ಮುಂದೆ ದಿಟ್ಟ ತನದಲ್ಲಿ ಬೆರೆದು ನಿಂದಿರಮ್ಮನು
ನಿಂದರೆ ಭವಹಿಂಗದಾಗಿ ಏನು ಕಾರಣ, ಕಾರಣ ಇಂತೀ ಬಾಧೆ
ಭವಂಗಳಿಗಂಜುವೆನಯ್ಯಾ ನಿನ್ನವರ ಸುಳುವು ನೀನೆಂದೇ
ಭಾವಿಸಿ, ತೊತ್ತು
ಭೃತ್ಯನಾಗಿಪ್ಪನಯ್ಯಾ ಕೂಡಲ ಸಂಗಮದೇವಾ"[2]

ನಾನು ಜಂದಮರೆಮರಿಗೆ ವಾಹನವನ್ನೇರಲು ಉಚ್ಚ ಪೀಠದಲ್ಲಿ ಕುಳಿತುಕೊಳ್ಳಲು ಅಂಜದೆ, ಅಳುಕದೆ ಎದುರಿಗೆ ನಿಂತುಕೊಂಡು ಮಾತನಾಡಲು ಹೆದರುತ್ತೇನೆ. ಅವರೆದುರಿಗೆ ಹಾಗೆ ವರ್ತಿಸುವ ಧೈರ್ಯ ನನ್ನಲಿಲ್ಲ. ಏಕೆಂದರೆ ಹಾಗೆ ಮಾಡುವುದರಿಂದ ಮೊದಲನೆಯದಾಗಿ ನನ್ನ ಭವವು ಹಿಂಗುವುದಿಲ್ಲ ಅಲ್ಲದೆ ಶೂಲಕ್ಕೀರುವ ಕಾಯ್ದ ಉಸಿಕಿನ ಮೇಲೆ ನಿಲ್ಲುವದೇ ಮೊದಲಾದ ಶಿಕ್ಷೆಗಳಿಗೆ ನಾನು ಬಹಳ ಅಂಜುತ್ತೇನೆ. ಅವಕ್ಕಾಗಿ ನಿನ್ನ ಶರಣರು ಹಾಗೂ ಭಕ್ತರನ್ನು ನೀನೇ ಎಂದು ನಂಬಿ ಅವರ ತೊತ್ತಾಗಿ ಇರುತ್ತೇನೆ.

"ಗಂಡ ಶಿವಲಿಂಗ ದೇವರ ಭಕ್ತ
ಹೆಂಡತಿ ಮಾರಿ ಮಸಣೆಯ ಭಕ್ತೆ
ಗಂಡ ಕೊಂಬುದು ಪಾದೋದಕ ಪ್ರಸಾದ
ಹೆಂಡತಿ ಕೊಂಬುದು ಸುರೆಮಾಂಸ

ಭಾಂಡ ಭಾಜನ ಶುದ್ಧವಿಲ್ಲದವರ ಭಕ್ತಿ
ಹೆಂಡದ ಮಡಕೆಯ ಹೊರಗೆ ತೊಳೆದಂತೆ
ಕೂಡಲಸಂಗಮದೇವ"೩

ದೇಹ ಹಾಗೂ ಮನಸ್ಸುಗಳು ನಿರ್ಮಲವಾಗಿ ಪರಿಶುದ್ಧವಾಗಿ ಒಂದಕ್ಕೊಂದು ಹೊಂದಿಕೊಂಡಿರುವಂಥ ಸಮಯದಲ್ಲಿ ನಡೆದಂಥ ಭಕ್ತಿ ಪೂಜೆಗಳು ಹೆಂಡದ ಗಡಿಗೆಯನ್ನು ಹೊರಮಗ್ಗಲು ತೊಳೆದು ಸ್ವಚ್ಛ ಮಾಡಿರುವಂತೆ ನಿರರ್ಥಕವಾದುದಾಗಿರುವುದು, ಸತಿ-ಪತಿಯ ವರೀರ್ವರೂ ಏಕರ್ಮದವರಾಗಿರಬೇಕು. ಗಂಡನು ಶಿವಭಕ್ತ, ಹೆಂಡತಿ ಮಾರಿಯ ಭಕ್ತಳು ಗಂಡನು ಪಾದೋದಕ ಪ್ರಸಾದವನ್ನು ಸ್ವೀಕರಿಸುವಾಗ ಹೆಂಡತಿಂಯು ಸುರೆ-ಮಾಂಸಗಳನ್ನು ಸ್ವೀಕರಿಸಿದರೆ ಪ್ರಯೋಜನವೇನು ಕೂಡಲ ಸಂಗಮದೇವಾ ಅಂಥವರ ಬಾಳುವೆಯೇ ನಿರರ್ಥಕ

"ಒಲೆಹತ್ತಿಯುರಿದೊಡೆ ನಿಲಬಹುದಲ್ಲದೆ ಧರೆಹತ್ತಿಯುರಿದೊಡನೆ ನಿಲಲಾರದು ಏರ
ನೀರುಣ್ಣಡೆ, ಬೇಲಿಕೆಯ ಮೇಯ್ವಡೆ ನಾರಿ ತನ್ನ ಮನೆಯಲ್ಲಿ ಕಳುವೊಡೆ ತಾಯಿ
ಮೊಲೆಯು ನಂಜಾಗೆ-ಕೊಲುವೊಡೆ ಇನ್ನಾರಿಗೆ ದೂರುವೆ ಕೂಡಲಸಂಗಮದೇವಾ"೪

ಒಲೆಯೊಳಗನ ಉರಿಯನ್ನು ನಂದಿಸಬಹುದು. ಹಿಡಿತಕ್ಕೆ ತರಬಹುದು. ಭೂಮಿಯೇ ಉರಿಯ ತೊಡಗಿದರೆ (ಅದನ್ನು) ನಂದಿಸಲು ಸಾಧ್ಯವಿದೆಯೇ, ದಿಬ್ಬವ ಪ್ರದೇಶವು ನೀರನ್ನುಂಡೆರೆ, ಬೇಲಿಯೇ ಎದ್ದು ಹೊಲವನ್ನು ಮೇಯತೊಡಗಿದರೆ, ಸ್ತ್ರೀಯೇ ತನ್ನ ಮನೆಯಲ್ಲಿ ಕಳವು ಮಾಡಿದರೆ ಹಾಗೂ ತಾಯಿಯ ಮೊಲೆ ಹಾಲು ವಿಷವಾಗಿ ಮಗುವನ್ನು ಕೊಲ್ಲಲೆತ್ನಿಸಿದರೆ ಯಾರಲ್ಲಿ ಮೊರೆಹೋಗುವುದು.

"ಎಂತೋ ಶಿವಭಕ್ತಿಯ ನಾನು ನಮಿಸುವೆನಯ್ಯಾ 'ಎಂತೋ ಶಿವಾಚಾರವೆನಗೆ ವೇದ್ಯ ವಪ್ಪಿದಯ್ಯಾ
ಕಾಮ, ಕ್ರೋದ, ಲೋಭ, ಮೋಹದಿಂದ ಕಟ್ಟು ಪಡೆದನು. ಹಸಿವು ತೃಷೆ
ವ್ಯಸನದಿಂದ ಕುದಿಯುತ್ತಿದ್ದೇನೆ. ಪಂಚೇಂದ್ರಿಯ ಸಪ್ತಧಾತು ಹಂಚು ಹರಿ ಮಾಡಿ
ಕಡು ಹುದಯ್ಯಾ! ಅಯ್ಯಾ ಅಯ್ಯಾ ಎನ್ನ ಹುಯ್ಯಲ ಕೇಳಯ್ಯಾ
ಕೂಡಲ ಸಂಗಮದೇವಯ್ಯ ನಾನೇನುವೇನಯ್ಯಾ"೫

ಪಂಚೇಂದ್ರಿಯ ಸಪ್ತಧಾತುಗಳು ನನ್ನ ಪ್ರಾಣವನ್ನು ಹರಿದು ಚೂರು ಚೂರು ಮಾಡಿ ಘಾಸಿಗೊಳಿಸುತ್ತಲಿವೆ. ಹೀಗಿರುವಾಗ ನನಗೆ ಶಿವಭಕ್ತಿಯ ಜ್ಞಾನವಾಗಲೀ, ಶಿವಾಚಾರದ ಅರಿವಾಗಲೀ, ಗೋಚರವಾಗುವುದು ಹೇಗೆ ಸಾಧ್ಯ? ನಾನು ಕಾಮ, ಕ್ರೋಧ, ಲೋಭ

ಹಾಗೂ ಮೋಹಗಳನ್ನು ತೊರೆದು ಯಾವಾಗಲೂ ನಿನ್ನ ಚಿಂತೆಯಲ್ಲಿ ನಿನ್ನನ್ನರಿಯುವ ಜ್ಞಾನದ ಹಸಿವೆ-ತೃಷೆಗಳು ಹೆಚ್ಚಾಗಿ ತಳಮಳಿಸ ತೊಡಗಿದೆ. ಈ ರೀತಿಯಾಗಿ ಇಬ್ಬಗೆಯಲ್ಲಿ ಸಿಲುಕಿದ ನನ್ನ ಮನದ ಗೋಳನ್ನು ಹೇಳುವುದೇ ಅಸಾಧ್ಯವಾಗಿ ಬಿಟ್ಟಿದೆ. ಪರಿಸ್ಥಿತಿ ಹೀಗಿರುವಾಗ ನಾನಾದರೂ ಏನು ಮಾಡಲಿ ನೀನೇ ಹೇಳು ಎಂದರು.

"ಹುಟ್ಟೆಂದು ಲೋಕದಲ್ಲಿ ಹುಟ್ಟಿಸಿ ಇಲಿಯ ಬಿಟ್ಟೊಡೆ ನಿಮಗೆನುವರಯ್ಯಾ
ಶಿವ ಬಟ್ಟೆಯೊಳೆನ್ನನು ಇರಿಸಯ್ಯಾ ಹರನೇ
ಹೊಲುಬುಗೆಟ್ಟೆನು ಬಟ್ಟೆಯ ತೋರಯ್ಯಾ
ಹುಯ್ಯಾಸಟ್ಟೆನು ಗಣಂಗಳು ಕೇಳಿರಯ್ಯ
ಕೂಡಲ ಸಂಗಮದೇವನೆನ್ನ ಕಾಡಿಹನಯ್ಯ"[೬]

ನೀನು ನನ್ನನ್ನು ಹುಟ್ಟು ಎಂದು ಹುಟ್ಟಿಸಿ ನನ್ನನ್ನು ಕೈಬಿಟ್ಟಿದಾದರೆ ನೀನೆ ಅಪಹಾಸ್ಯಕ್ಕೆ ಗುರಿಯಾಗುವಿ. ಅದಕ್ಕಾಗಿ ನೀನು ನನ್ನನ್ನು ಯಾವಾಗಲೂ ಒಳ್ಳೆಯ ಮಾರ್ಗದಲ್ಲಿಯೇ, ಶಿವಪಥದಲ್ಲಿಯೇ ಇರಿಸು ಹೊಲಬುಗೆಟ್ಟಿದ್ದೇನೆ ದಾರಿಯನ್ನು ತೋರಿಸು ಓ ಗಣಂಗಳೇ ಕೇಳಿರಿ ಕೂಡಲ ಸಂಗಮದೇವನೇ ನನ್ನನ್ನು ಕಾಡುತ್ತಿದ್ದಾನೆ. ನನ್ನ ಭವಣೆಯನ್ನು ನೀವೇ ಪರಿಹರಿಸಿರಿ.

### ೩.೨. ಹಾವಿನಹಾಳ ಕಲ್ಲಯ್ಯ

ಹಾವಿನಹಾಳ ಗ್ರಾಮವು ವಿಜಾಪುರದಿಂದ ವಾಯುವ್ಯಕ್ಕೆ ಸುಮಾರು ೩೫ ಮೈಲಿ ದೂರದಲ್ಲಿದೆ. ಈ ಗ್ರಾಮದ ಶಿವನಯ್ಯ ಮತ್ತು ಸೋಮವ್ವೆಯರ ಮಗನೇ ಹಾವಿನಹಾಳ ಕಲ್ಲಯ್ಯ. ಕಲ್ಲೇಶ್ವರನ ಅನುಗ್ರಹದಿಂದ ಹುಟ್ಟಿರುವುದರಿಂದ ಕಲ್ಲಯ್ಯನಾದ ಈತ ಪವಾಡಪುರುಷ ಈಗಲೂ ಕಲ್ಲೇಶ್ವರ ಜಾತ್ರೆಯ ಸಂದರ್ಭದಲ್ಲಿ ಈತನನ್ನು ಬಣ್ಣಿಸುವ ಚರಿತ್ರೆಯನ್ನು ಕೇಳಿಸುವ ಸಂಪ್ರದಾಯವಿದೆ.

ಕಲ್ಲಯ್ಯನು ಚೆನ್ನದ ಕುಶಲಕಲೆಯಲ್ಲಿ ನಿಪುಣನಾಗಿದ್ದನು. ಶಿವಪೂಜೆಯ ಕಡೆ ಗಮನ ಹರಿಸಿದನು. ತನ್ನ ಮೂಲಕಸುಬನ್ನು ಮುಂದುವರಿಸುವಂತೆ ಈತನ ತಂದೆ ಹೇಳಿದರೂ ಅವನು ಕೇಳಲಿಲ್ಲ. ತಂದೆಯಿಂದ ಏಟು ತಿಂದು ದೇವಸ್ಥಾನಕ್ಕೆ ಒಂದು ಕಠಾರಿಯಿಂದ ತನ್ನ ಹೊಟ್ಟೆಯನ್ನು ತಿವಿದುಕೊಂಡ, ಹಲವಾರು ವಚನಕಾರರು, ಕವಿಗಳು ತಮ್ಮ ಕೃತಿಯಲ್ಲಿ ಈತನ ಬಗ್ಗೆ ಉಲ್ಲೇಖಿಸಿದ್ದಾರೆ. ಈತ ಪವಾಡ ಪುರುಷ ಆಗ ಅಶರೀರವಾಣಿಯಾಯಿತು. "ವೇದಜಡರನ್ನು ನೀನು ಗೆಲ್ಲಬೇಕು ರುದ್ರಮುನಿಯನ್ನು ಕಾಣು ಮುಂದುಗೆಡಬೇಡ"

ಕಲ್ಲಯ್ಯನಿಗೆ ಈ ಮಾತು ಪರಮಾತ್ಮನ ಅಭಯವಾಗಿ ಸಾಂತ್ವಾನ ವಾಕ್ಯವಾಗಿ ಪರಿಣಮಿಸಿತು.

ಅಂದಿನಿಂದ ಶಿವಾನುಭವ ಶಾಸ್ತ್ರದ ಅಭ್ಯಾಸ, ಹರಶರಣರ ಸಂಗವೇ ಅವನ ಜೀವಾಳವಾಯಿತು. ಭಕ್ತಿಯ ವಿಸ್ತಾರ ಹೆಚ್ಚಿನಸುವುದೇ ಅವನ ಕಾಯಕವಾಯಿತು.

ಒಮ್ಮೆ ಕಲ್ಲಯ್ಯನಿಗೆ ಹಾವು ಕಚ್ಚಿತು. ತಕ್ಷಣವೇ ಹಾವೇ ಸತ್ತಿತು. ಕಲ್ಲಯ್ಯನಿಗೆ ಏನೂ ಆಗಲಿಲ್ಲ ಅವನು ಹಾವನ್ನು ಬದುಕಿಸುವಂತೆ ಕಲ್ಲಯ್ಯನಲ್ಲಿ ಮೊರೆಯಿಟ್ಟ, ಕೆಲವೊತ್ತಿನಲ್ಲಿ ಹಾವು ಹರಿದಾಡಿತು. ದೇವಾಲಯದಲ್ಲಿ ನೆರೆದ ಜನ ಇದನ್ನು ನೋಡಿ ಅಚ್ಚರಿ ವ್ಯಕ್ತಪಡಿಸಿದರು.

"ಕಲ್ಲೊಳಗೂ ಕಿಚ್ಚು ಉರಿಯದ ಪರಿಯಂತೆ
ಬೀಜದೊಳಣ ವೃಕ್ಷ ಉರಿಯುವ ಪರಿಯಂತೆ
ಪುಷ್ಪದ ಕಂಪು ನೆನೆಯಲ್ಲಿ ತೋರಿದಂತೆ
ಚಂದ್ರಕಾಂತದ ಉದಕ ಒಸರದ ಪರಿಯಂತೆ
ಮಹಾಲಿಂಗ ಕಲ್ಲೇಶ್ವರನಲ್ಲಿ ಲಿಂಗೈಕ್ಯ
ಇಹವೆನ್ನ ಪರವೆನ್ನ ಸಹಜವೆನ್ನ ತಾನೆನ್ನ"[೯]

ಲಿಂಗೈಕ್ಯದ ಸ್ಥಿತಿಯು ಇಹದಲ್ಲಿರುವ ಎಲ್ಲ ವಸ್ತುಗಳನ್ನು ಮೀರಿದ್ದಿರುತ್ತದೆ. ಅದು ಇಂತಹ ಅನೇಕ ವಚನಗಳಲ್ಲಿ ಕಲ್ಲಯ್ಯನ ಅನುಭವದ ಸರಳ ನುಡಿಗಳೊಂದಿಗೆ ಅನುಭಾವ ಅಂತರಂಗದ ಬೆಳಕನ್ನು ಅವರ ಅನೇಕ ವಚನಗಳಲ್ಲಿ ಕಾಣಬಹುದಾಗಿದೆ. ಮಾನವನ ಪಂಚೇಂದ್ರಿಯಗಳಿಗೆ ಸಿಗದ ಈ ಪರಮ ವಸ್ತು ಕಲ್ಲಯ್ಯನವರು ಅವರ ಮೂಲಕವೇ ಕಟ್ಟಿಕೊಡುವುದು ಇನ್ನೂ ವಿಚಿತ್ರವಾಗಿದೆ. ಅವರಲ್ಲಿ ಒಳಗು–ಹೊರಗು ಪಾಪ–ಪುಣ್ಯ, ಮೇಲು–ಕೀಳು, ನಾನು–ಅವನು ಎಂಬಂತಹ ಬೇದವೇ ಇಲ್ಲ. ಒಂದರ ಅನುಭಾವ ಆಧ್ಯಾತ್ಮಿಕ ಚಿಂತನಾಕ್ಷೇತ್ರಕ್ಕೆ ಅದರಿತ್ತ ದೊಡ್ಡ ಕೊಡುಗೆಯಾಗಿದೆ ಎಂದು ಹೇಳಬಹುದು.

"ಅತ್ಯಾಶೆಯೆಂಬುದೆ ಪಾಪ ಬೇರೆ ಪಾಪ ಬೇರೆ ಪಾಪೆಂಬುದಿಲ್ಲ
ಕಂಡರೆ ಅಯ್ಯಾ
ಪರಿಣಾಮವೆಂಬುದೆ ಪರಮಾನಂದ ಬೇರೆ ಪರಲೋಕವಿಲ್ಲ
ಕಂಡರೆ ಅಯ್ಯಾ
ಇಹ ಪರದಾಶಿಯಿಲ್ಲದಿಹುದೆ ಶಿವಯೋಗ
ಮಹಾಲಿಂಗ ಕಲ್ಲೇಶ್ವರ ಒಲ್ಲ ಸಿದ್ಧರಾಮನ ಪರಿಯ"[೧೦]

"ಅರ್ಥವೆಂಬುದೆ ಪಾಪ, ಬೇರೆ ಪಾಪವಿಲ್ಲ ಕಂಡಯ್ಯ
ಪರಿಣಾಮವೆಂಬುದು ಪುಣ್ಯ ಬೇರೆ ಪುಣ್ಯವಿಲ್ಲ ಕಂಡಯ್ಯ
ಪಾಪ ಪುಣ್ಯಗಳ ನರೆಗೆಳೆದ ಉಳುಮೆ ಶಿವಯೋಗ
ಮಹಾಲಿಂಗ ಕಲ್ಲೇಶ್ವರನು ಬಲ್ಲ ಸಿದ್ಧರಾಮನ ಪರಿಯ"[೧೧]

ಆಸೆ ಎಂಬುದೆ ಪಾಪ, ನಿರಾಸೆ ಎಂಬುದೆ ಪುಣ್ಯ. ಈ ರೀತಿಯ ಆಚರಣೆಯಿಂದಲೇ ಪರಮಾನಂದವು ದೊರೆಕಿಕೊಳ್ಳುವುದು ಆಗ ಇಹ ಪರದಾಸೆಯು ದೂರವಾಗುವದು ಈ ಸ್ಥಿತಿಯೇ ಶಿವಯೋಗವು ಪುಣ್ಯ ಇದರ ಹೊರೆತು ಬೇರೊಂದಿಲ್ಲ ಪುಣ್ಯ ಎಂದು ಹೇಳುತ್ತಾನೆ. ಹಾಗೇ ಇನ್ನೊಂದು ವಚನದಲ್ಲಿ ಆಸೆ ಮಾಡಿ ಧನಗಳಿಸುವುದೇ ಪಾಪವೆನಿಸುವುದು. ಆದರೆ ಹೀಗೆ ಧನಗಳ ಸಾಧೆ ಲಿಂಗದಲ್ಲಿ ಪರಿಣಾಮವೆನಿಸುವುದು ಅದೇ ಪುಣ್ಯವು, ಈ ರೀತಿಯಾಗಿ ಪುಣ್ಯಪಾಪಗಳ ವಿಚಾರವನ್ನರಿತು ಆಚರಿಸಿದರೆ ಅದೇ ಶಿವಯೋಗ ಅದೇ ಪುಣ್ಯ ಆಗ ಅವನಲ್ಲಿ ಕೆಡುಕಾದುದು ಹೊರಟು ಹೋಗುತ್ತದೆ. ಇದು ಹೊರಟು ಹೋಗಿ ಯಾವುದು ಅವನಲ್ಲಿ ಉಳಿಯುವುದೋ ಅದೇ ನಿಜವಾದ ಶಿವಯೋಗದ ಪರಿಸ್ಥಿತಿ.

ಕುಲಹೀನ ಶಿಷ್ಯಂಗೆ ಅನುಗ್ರಹ ಕೊಟ್ಟು
ತನ್ನ ಪ್ರಾಣಲಿಂಗವ ನಿಕ್ಷೇಪಿಸಿ ಕರ್ಣಮಾತ್ರವ ಹೇಳಿ
ಆ ಶ್ರೀಗುರು ಒಂದು, ಆ ಶಿಷ್ಯನ ಮನೆಯ ಹೋಗಲೊಲ್ಲದೆ
ಅಕ್ಕಿ ತುಪ್ಪವ ನೀಡಿಸಿಕೊಂಡುಂಬುವವನ ಕೇಡಿಂಗಿನ್ನೇವೆನಯ್ಯಾ
ತನ್ನ ಪ್ರಾಣಲಿಂಗವನವರಿಗೆ ಕೊಟ್ಟು
ತಾ ಹೋಗೆನೆಂಬ ವ್ರತಗೇಡಿಗಿನ್ನೇವೆನಯ್ಯಾ
ಅವನ ಧನಕ್ಕೆ ತಂದೆಯಾದನಲ್ಲದೆ ಅವನ ಕುಲಕ್ಕೆ ತಂದೆಯಲ್ಲ
ಇದು ಕಾರಣ ಮಹಾಲಿಂಗ ಕಲ್ಲೇಶ್ವರಾ
ಲಿಂಗವ ಮಾರಿಕೊಂಡುಂಬ ಭಂಗಕಾರರು ಕೆಟ್ಟ ಕೇಡನೇನೆಂಬೆನಯ್ಯಾ"[೨]

ಡೋಂಗಿ ಗುರುಗಳನ್ನು ಕುರಿತು ಕಲ್ಲಯ್ಯ ಕಠೋರವಾಗಿ ನಿಂದಿಸಿರುವನು ಕುಲ ಹೀನ ಶಿಷ್ಯಂಗೆ ಕುಲ ಹೀನ ಗುರು ಎಂದು ವಿಡಂಬಿಸಿರುವನು ಇಂಥ ಗುರುಗಳು ಶಿಷ್ಯನಿಗೆ ಪ್ರಾಣಲಿಂಗವ ಕೊಟ್ಟು ಮಂತ್ರೋಪದೇಶ ಮಾಡುವರು. ಆದರೆ ಶಿಷ್ಯನ ಮನೆಯಲ್ಲಿ ಊಟ ಮಾಡಲಾರರು. ಧನ ಧಾನ್ಯಗಳನ್ನು ಮಾತ್ರಕೊಂಡು ಹೋಗುವವರು. ಶಿಷ್ಯನ ಮನೆಯಲ್ಲಿ ಊಟ ಮಾಡುವುದು ಮೈಲಿಗೆ ಎಂದು ತಿಳಿಯುವರು. ಇಂಥ ವ್ರತಗೇಡಿಗಳನ್ನು ಟೀಕಿಸುತ್ತಾ ಮುಂದೆ ಲಿಂಗವನ್ನು ಮಾರಿಕೊಂಡು ಉಣ್ಣುವ ಹೀನರೆಂದು ಜರಿದಿರುವನು.

"ಮನೆಮನವೇಕುರ್ವಾಥಗದವರಲ್ಲಿ
ತನುಗುಣ ನಾಸ್ತಿಯಾಗದವರಲ್ಲಿ
ಬುದ್ದಿಗೆ ಬುದ್ದಿ ಒರಣವಾಗದವರಲ್ಲಿ
ಭಾವಕ್ಕೆ ಭಾವ ತಾರ್ಕಣೆಯಾಗದವರಲ್ಲಿ
ಶೀಲಕ್ಕೆ ಶೀಲ ಸಮಾನವಿಲ್ಲದವರಲ್ಲಿ

ಅವರೊಡನೆ ಕುಳ್ಳಿರಲಾಗದು
ಸಮಗಡೂದಲ್ಲಿ ಮಾತನಾಡಲಾಗದು
ಸಂಸರ್ಗತೋ ದೋಷಗುಣಾ, ಭವಂತಿ ಎಂಬುದಾಗಿ
ಇದು ಕಾರಣ ಮಹಾಲಿಂಗ ಕಲ್ಲೇಶ್ವರಾ
ನಿಮ್ಮ ಸದ್ಭಕ್ತಿಯನರಿಯದವರ ಸಂಗದಿಂದ
ನಿಮಗಾನಾ ದೂರವಾಗಿಪ್ಪೆನಯ್ಯ"[೧೩]

ಭಕ್ತನ ಉಚ್ಚ ಗುಣಗಳು ಗುರುವಿನಿಂದಲ್ಲದೆ ತನ್ನ ಜೋಡಿಗರೊಡನೆ ವರ್ತಿಸುವದರಿಂದಲೂ ಅವು ಹೊರ ಹೊಮ್ಮುತ್ತವೆ. ಆದುದರಿಂದ ಯಾವ ಗುಣಗಳು ತನ್ನೊಡನೆ ಹೊಂದಿಕೆಯಾಗಿರುತ್ತವೆಯೋ ಅಂಥವುಗಳೊಡನೆ ಭಕ್ತನು ಬರೆದು ವರ್ತಿಸಬೇಕು. ಒಡನಾಡಿಗಳಲ್ಲಿ ದುರ್ಗುಣಗಳು ವಾಸವಾಗಿರಬಾರದು. ಅವರು ಸದ್ಬುದ್ಧಿ ಸದ್ಭಾವವುಳ್ಳವರಾಗಿರಬೇಕು. ಇದರಿಂದ ಅವರ ಸದ್ಗುಣಗಳು ಅವನಲ್ಲಿ ಬರುವವು, ದುರ್ಗುಣಗಳೊಡನೆ ಇದ್ದರೆ ಅವರ ದುಷ್ಟಗುಣಗಳು ಅವನಲ್ಲಿ ಬರುವವು ಸಮಾಜದಲ್ಲಿ ಪ್ರತಿಯೊಬ್ಬ ಯಾವುದೇ ರೀತಿಯಿಂದ ಸಮಾಜ ಅಶಾಂತಿ, ಅನೀತಿ, ಸುಳ್ಳು, ಮೋಸ, ವಂಚನೆಗಳು ನಡೆಯುವಲ್ಲಿ ಎಂಬ ಆಶಯವಾಗಿದೆ.

"ಒಲಿದೊಲಿಸಿಕೊಳ್ಳಬೇಕು, ಬಲಿದಲ್ಲಿದಿಲ್ಲ
ಹಲವು ಕೊಂಬಿಗೆ ಹಾರದಿರು ಮರುಳ
ಅಟ್ಟಿ ನೋಡುವ, ಮುಟ್ಟಿ ನೋಡುವ, ತಟ್ಟಿ ನೋಡುವ, ಒತ್ತಿ ನೋಡುವ
ಅಟ್ಟದಡೆ, ತಟದಡೆ ನಿಷ್ಠೆಯಂ ಬೀಡದಿರ್ದಡೆ
ತನ್ನ ನೀವ ಮಹಾಂಗ ಕಲ್ಲೇಶ್ವರ"[೧೪]

ಈ ವಚನ ಕಲ್ಲಯ್ಯನ ಆತ್ಮ ಶೋಧ ಮಾಡಿಕೊಡುತ್ತದೆ. ಪರಮಾತ್ಮನನ್ನು ಒಲಿಸಿಕೊಳ್ಳಬೇಕಾದರೆ ತಾನು ಅವನನ್ನು ಮೊದಲು ಪ್ರೀತಿಸಬೇಕು. ಹೀಗೆ ಪ್ರೀತಿಸದಿದ್ದರೆ ಅವನು ಒಲಿಯನು, ಆದರೆ ಈ ಪ್ರೀತಿಯು ನಿಶ್ಚಲವಾಗಿರಬೇಕು ಅವನಲ್ಲಿ ಹೀಗೆ ನಿಶ್ಚಲತ್ವವಿದೆಯೋ ಹೇಗೆಂಬುದನ್ನು ಪರಮಾತ್ಮನು ಮೊದಲು ಪರೀಕ್ಷಿಸುತ್ತಾನೆ. ಅವನು ಭಕ್ತನನ್ನು ಅನೇಕ ಸಂಕಟಗಳಿಗೆ ಗುರಿಮಾಡುತ್ತಾನೆ. ಅವುಗಳನ್ನು ಭಕ್ತನು ಅಂಜದೆ ಎದುರಿಸಿದರೆ ಪರಮಾತ್ಮನು ಅವನಿಗೆ ಒಲಿಯುವನು ಇಷ್ಟೇ ಅಲ್ಲ ತನ್ನನ್ನೇ ಅವನ ಕೈಯ್ಯಲ್ಲಿ ಕೊಟ್ಟು ಬಿಡುವನು ಎಂದು ವಿವರಿಸಿ ಹೇಳುತ್ತಾನೆ.

"ಲಿಂಗ ನಿಷ್ಠೆಯಿಲ್ಲದವರಂಗಳವ ಮಟ್ಟಲಾಗದು
ಜಂಗಮ ನಿಷ್ಠೆಯಿಲ್ಲದವರೊಡನೆ ಮಾತನಾಡಲಾಗದು

ಪ್ರಸಾದ ನಿಷ್ಠೆಯಿಲ್ಲದವರ ಸಹಪಂಕ್ತಿಯಲ್ಲಿ ಕುಳ್ಳಿರಲಾಗದು
ಲಿಂಗ ಮುಖಕ್ಕೆ ಬಾರದ ರುಚಿ ಕಿಲ್ಬಿಷ (ನೋಡಾ)
ಮುಟ್ಟಲಾಗದು ಮಹಾಲಿಂಗ ಕಲ್ಲೇಶ್ವರನೊಲಿಸುವ ಶರಣಾಂಗ"[೧೫]

ಲಿಂಗ, ಜಂಗಮ, ಪ್ರಸಾದ ಈ ಮೂರು ಭೌತಿಕ ವಸ್ತುಗಳನ್ನು ಯಾರೂ ಪರಿಪೂರ್ಣವಾಗಿ ಮೂರ್ತಿಕರಿಸಿಕೊಂಡು ಅವುಗಳನ್ನು ಅರಿವನ್ನು ಹೊಂದಿ ನಿಷ್ಠೆಯನ್ನು ವ್ಯಕ್ತಪಡಿಸುತ್ತಾರೆಯೋ ಅವರು ಮೂರ್ತ ಸ್ವರೂಪಿಗಳು ಆದರೆ ಯಾರೂ ಬಹಿರಂಗದಲ್ಲಿ ಲಿಂಗ, ಜಂಗಮ, ಪ್ರಸಾದ ಇವುಗಳ ಬಗ್ಗೆ ಬಹಿರಂಗ ನಿಷ್ಠೆಯನ್ನು ತೋರಿಸಿ ಅತಂಕವಾಗಿ ಇವುಗಳಿಂದ ದೂರ ಇದ್ದವರೊಂದಿಗೆ ಯಾವುದೇ ರೀತಿಯ ಸಂಬಂಧ ಇಟ್ಟುಕೊಳ್ಳಲಿಕ್ಕೆ ಸಾಧ್ಯವಿಲ್ಲ. ಏಕೆಂದರೆ ಅವರಲ್ಲಿಯೇ ಕ್ರಿಯೆ ಮತ್ತು ಜ್ಞಾನ ಆಳವಡಿಸದಿದ್ದಾಗ ಅವರಿಂದ ಕಲಿಯುವದೇನೆಂಬ ಪ್ರಶ್ನಿಸುತ್ತೇವೆ ಕಲ್ಲಯ್ಯ ಮಾತು, ಮರು ಮತ್ತು ಕೃತಿ ಒಂದಾದಾಗ ವಸ್ತುವಿನ ಸ್ವರೂಪ ಸತ್ಯವಾಗಿ ಕಾಣಿಸುತ್ತದೆ. ಹೀಗಾಗಿ ಮೂರ್ತ ಅಮೂರ್ತಗಳು ಒಂದಾದಾಗ ಅವುಗಳಲ್ಲಿ ನಿಷ್ಠೆ ಅಳವಟ್ಟುತ್ತದೆ.

**೩.೩. ಕಾಮಾಟದ ಭೀಮಣ್ಣ**

"ಕಾಮಾಟ" ಎಂದರೆ ಮನೆ ಕಟ್ಟುವ ಕಾಯಕ ಅಂದರೆ ಬಡಿಗಿ ಕೆಲಸ. ಆತನ ವಚನಗಳನ್ನು ಗಮನಿಸಿದಾಗ ತಿಳಿಯುತ್ತದೆ.

"ಧಾರೇಶ್ವರ" ಎಂಬುದು ಕಾಮಾಟ ಭೀಮಣ್ಣನ ವಚನಗಳ ಅಂಕಿತ. ಈತ ಬಸವಣ್ಣನ ಸಮಕಾಲೀನ

ಕಾಮವಟ್ಟದ ಭೀಮಣ್ಣ ಹಾಗೂ ಕಾಮಾಟದ ಭೀಮಣ್ಣ ಎಂಬ ಎರಡು ಹೆಸರುಗಳು ಕೇಳಿಬರುತ್ತಿದ್ದು. ಈ ಎರಡು ಹೆಸರೂ ಒಬ್ಬನದ್ದೇ ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

ಈತ ತನ್ನ ವಚನದಲ್ಲಿ ಮನೆ, ಕಂಬ, ತೊಲೆ, ಆಯ ಮುಂತಾದ ವೃತ್ತಿ ಪದಗಳನ್ನು ಬಳಸಿದ್ದಾನೆ, ಐಗ್ಯೆ, ನಾಗ್ಯೆ, ಮೂಗ್ಯೆ ಹೀಗೆ ಅಳತೆಗಳನ್ನು ಬಳಸಿದ್ದಾನೆ. ಈ ಅಳತೆಗಳು ಅಧ್ಯಾತ್ಮದ ಸಂಕೇತಗಳಾಗಿದ್ದು ಬೆಡಗಿನಿಂದ ಕೂಡಿವೆ.

ಈತ ರಚಿಸಿದ ನಾಲ್ಕು ವಚನಗಳು ಲಭ್ಯವಾಗಿದ್ದು, ಸಮಗ್ರ ವಚನ ಸಂಪುಟದಲ್ಲಿ ಪ್ರಕಟವಾಗಿವೆ.

ಲಭ್ಯವಾಗಿರುವ ಈತನ ನಾಲ್ಕು ವಚನಗಳು ತುಂಬಾ ಪ್ರಬುದ್ಧವಾಗಿವೆ. ಈತನ ವಚನಗಲು ಬೆಡಗಿನಿಂದ ಇರುವುದರಿಂದ ಇವುಗಳನ್ನು ಆಧ್ಯಾತ್ಮ ದೃಷ್ಟಿಯಿಂದಲೇ ನೋಡಬೇಕು.

"ಮೂರು ಕೋಲ ಬ್ರಹ್ಮಂಗೆ ಅಳೆದು ಕೊಟ್ಟೆ
ನಾಲ್ಕು ಕೋಲ ವಿಷ್ಣುವಿಗೆ ಅಳೆದು ಕೊಟ್ಟೆ
ಐದು ಕೋಲು ರುದ್ರಂಗೆ ಅಳೆದು ಕೊಟ್ಟೆ
ಆರು ಪೋಲ ಈಶ್ವರಂಗೆ ಅಳೆದು ಕೊಟ್ಟೆ
ಒಂದು ಕೋಲ ಸದಾಶಿವಂಗೆ ಅಳೆದು ಕೊಟ್ಟೆ
ಇಂತಿ ಐವರು ಕೋಲಿನ ಒಳಹೊರಗಿನಲ್ಲಿ
ಅಳಲುತ್ತ ಬಳಲುತ್ತ ಒಳಗಾದರು
ಇಂತಿ ಒಳಹೊರಗೆ ಶೋಧಿಸಿಕೊಂಡು
ಅಳಿವುಳಿವಿನ ವಿವರನವನರಿಯಬೇಕು
ಧಾರೇಶ್ವರ ಲಿಂಗವನರಿವುದಕ್ಕೆ"[೭]

ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ ಐದು ಮಂದಿಗೆ ಅಳತೆಗೋಲನ್ನು ಕೊಡಬೇಕಾದರೆ ಮೊದಲು ನಮ್ಮನ್ನು ನಾವು ಅರಿಯಬೇಕು. ಆದರೂ ಬೇರೆಯವರನ್ನು ಅಳೆಯಬೇಕಾದರೆ ಅವರ ತಳಮಳವನ್ನು ಶೋಧಿಸಿ ಅರಿತು, ಅಳಿವು–ಉಳಿವುಗಳನ್ನು ವಿವರವಾಗಿ ಅರಿಯಬೇಕು. ಆದುದರಿಂದ ಇವುಗಳನ್ನು ಅರಿತು ಬಾಳಬೇಕಾದರೆ ಮೊದಲು ಧಾರೇಶ್ವರ ಲಿಂಗವನ್ನು ಅರಿತು ಅವನ ಆಗೂ ಹೋಗುಗಳನ್ನು ಅಳತೆಯ ಮಾಪನಗಳನ್ನು ತನ್ನಲ್ಲಿರುವ ನಾಲ್ಕು ಹಸ್ತಗಳನ್ನು ಮೊದಲು ಗಮನಿಸಬೇಕು. ನಂತರ ಧಾರೇಶ್ವರ ಲಿಂಗವನ್ನು ಅರಿತು ಬಾಳಬೇಕು ಮತ್ತು ಮನುಷ್ಯತ್ವದ ಗುಣವನ್ನು ಅಳತೆ ಮಾಡಬೇಕಾದರೆ ಅವರ ಚಹರೆ, ನಾಲ್ಕು ಮುಖಗಳುಳ್ಳ ಚೌಕದ ಸ್ವರೂಪದಲ್ಲಿ ಅಡಗಿ ಕುಳಿತಿರುತ್ತದೆ. ಈ ಸ್ವರೂಪವನ್ನು ಅಳತೆ ಮಾಡುವುದು ಬಹಳ ಕಷ್ಟ.

"ಜೀವನವೆಂಬ ಅಳತದ ಕೋಲಿನಲ್ಲಿ
ಭಾವಜ್ಞ ನಾನಾದೆನೆಂಬದವರೆಲ್ಲರೂ
ಅಳತಕ್ಕೆ ಸಂದು ಹೊರಳಿ ಮರಳುತ್ತೈದಾರೆ
ಸರ್ವಸಂಗ ಪರಿತ್ಯಾಗದ ಮಾಡಿದೆನೆಂಬ ಅರುಹಿರಿಯರೆಲ್ಲರೂ
ತಥ್ಯ ಮಿಥ್ಯವೆಂಬ ಕೋಲಿನಲ್ಲಿ ಅಳತೆಗೊಳಗಾಗುತ್ತೈದಾರೆ
ಹಿಂದಕ್ಕೊಂದು ಕುರುಹಿಲ್ಲ ಮುಂದಕ್ಕೊಂದು ಲಕ್ಷ್ಯವಿಲ್ಲಾ
ಎಂದು ಹಿಂಗಿ ನುಡಿದು
ನಾವು ನಿರಂಗಿಗಳೆಂದು ಅಂಗವ ಹೋತು ತಿರುಗಾಡುವರೆಲ್ಲರು

ಬಂದ ಮೋಕ್ಷ ಕರ್ಮಗಳಿಂದ
ಅಂಗಳ ಬಾಗಿಲ ದಾಸಂಗಳಲ್ಲಿ
ಬಾ ಹೋಗೆನಿಸಿಕೊಂಬ ನಿಂದೆಯ ಕೋಲಿನಲ್ಲಿ
ಅಳತೆಕ್ಕೊಳಗಾಹರೆಲ್ಲರು ಸರ್ವಾಂಗ ಲಿಂಗಿಗಳಪ್ಪರೆ?
ಇದರಂದವ ತಿಳಿದು ಆಕಾಶ ಇರವು ಅವರಿರವಿನಂತೆ
ತಾವಾಗಿ ಅರಿವರಲ್ಲಿ ಅರುಹಿಸಿಕೊಂಬನ್ನಕ್ಕ
ಅವರೊಡಗೂಡಿ ಅವರು ತನ್ನರಿಂದ ಮತ್ತೆ
ಆ ಅರಿಕೆಯ ತೆರ ತಾನೆಂಬುದನೆ ಪ್ರಮಾಣಿಸಿ
ಪಕ್ವ ವಾಹನಕ್ಕೆ ತೊಟ್ಟನೊಳಗಿಪ್ಪ ಫಲದ ತೆರನಂತೆ
ಈ ದೃಷ್ಟ ತನ್ನಷ್ಟವಹನ್ನಕ್ಕ
ತನ್ನ ಕಣ್ಣಿನಿಂದ ಕನ್ನಡಿಯ ನೋಡಿ
ತನ್ನ ತಾನೇ ಅರಿವುದು ಕಣ್ಣೊ ಕನ್ನಡಿಯೋ?
ಕನ್ನಡಿಯೆಂದರೆ ಅಂಧಕರಿಗೆ ಪ್ರತಿರೂಪಿಲ್ಲ
ಇದು ಕಾರಣದಲ್ಲಿ ಅವರಿಂದ ತಾನರಿದು ತನ್ನರಿವ ಅವರಿದು
ಉಭಯದರಿವು ಒಡಗೂಡುವಿನ್ನಕ್ಕ ಹಿಂದಣ ಕುರುಹು
ಮುಂದಣ ಲಕ್ಷವ ವಿಚಾರಿಸಿ ಮರೆಯ ಬೇಕು
ಧಾರೇಶ್ವರ ಲಿಂಗನ ಕೂಡಬಲ್ಲದೆ"[೮]

ಜೀವಿಯಾದವನು ತನ್ನ ಜೀವನದ ಅಳತೆಗೆ ತನ್ನನ್ನು ತಾನು ಬಲಿಪಶುವಾಗಿ ತನ್ನ ಜೀವನದಲ್ಲಿ ಸರ್ವ ಪರಿತ್ಯಾಗವನ್ನು ಅರಿಯದೆ ಸತ್ಯ ಮಿಥ್ಯಗಳನ್ನರಿಯದೆ ಯಾವುದೇ ಕುರುಹು ಇಲ್ಲದೆ ಮುಂದಿನ ಭವಿಷ್ಯದ ಲಕ್ಷ್ಯವಿಲ್ಲದೆ ಹೆಗ್ಗಳಿಕೆಯಿಂದ ಮಾತನಾಡುತ್ತಾನೆ. ಮೋಕ್ಷಕರ್ಮಗಳೆನ್ನದೆ ತನ್ನ ಸರ್ವಾಂಗಗಳನ್ನು ಹೊತ್ತು ಒಂದು ಜೀವನದ ಬಂಧನದಲ್ಲಿ ಸಿಲುಕಿ ಬೇರೆಯವರ ನಿಂಧನೆಗಳಿಗೆ ತಲೆಬಾಗಿಸಿ ತನ್ನ ಎಲ್ಲಾ ಸರ್ವಾಂಗವನ್ನು ಆ ಲಿಂಗಕ್ಕೆ ಧಾರೆ ಎರೆಯುತ್ತಾನೆ. ಅಲಿಂಗದ ಆಕಾರ ಮನುಷ್ಯನ ಭಾವನೆ ಲಿಂಗದ ಪರಿಕಲ್ಪನೆ ಅವುಗಳನ್ನು ಅರಿತು, ಒಳಿತು, ಕೆಡಕುಗಳನ್ನು ತಿಳಿದು ಎಲ್ಲಾ ಜನರೊಂದಿಗೆ ಒಡಗೂಡಿ ಬದುಕುವ ಕಾಯಕಯೋಗಿಯೇ ಮೋಕ್ಷವಾಗಿ ತನ್ನ ಕಾಯಕದಲ್ಲಿ ಜೀವನವನ್ನು ಮುಡಿಪಾಗಿಡುತ್ತಾನೆ. ಒಂದು ಸಮಾಜದಲ್ಲಿ ಎಲ್ಲಾ ತರಹದ ಕುರುಹುಗಳು ಇರುತ್ತದೆ. ಅವುಗಳನ್ನು ಪ್ರಮಾಣಿಸಿ ಅಳತೆ ಮಾಡಿ ತನ್ನ ಕಣ್ಣಿನ ಕನ್ನಡಿಯಂತೆ ಗುರುತಿಸಿ ಅಂಧಕರಿಗೆ ಈ ತಾರ್ಕಿಕ ಜೀವನವನ್ನು

ಅರಿತು ತನ್ನ ಭಾವನೆಗಳನ್ನು ಸತ್ಯಾಸತ್ಯತೆಗಳನ್ನು ಮೈಗೂಡಿಸಿ ಲಕ್ಷವನ್ನು ಕೊಟ್ಟು ವಿಚಾರಿಸಿ ಮರೆಯದೆ ಧಾರೇಶ್ವರಲಿಂಗಕ್ಕೆ ತನ್ನನ್ನು ಅರಿತುಕೊಂಡನು.

### ೩.೪. ಕೊಂಡೆಯ ಮಂಚಣ್ಣ

ಶರಣ ಸಮೂಹದಲ್ಲಿ ಶರಣ ಗುಪ್ತ ಮಂಚಣ್ಣ ಅಥವಾ ಕೊಂಡೆಯ ಮಂಚಣ್ಣನವರು ಒಬ್ಬರು. ಮಂಚಣ್ಣತ್ರಯರಲ್ಲಿ ಮೂರು ಜನ ಕಂಡು ಬರುತ್ತಾರೆ. ೧. ರಾಯಸದ ಮಂಚಣ್ಣ ೨. ಕೊಂಡೆಯ ಮಂಚಣ್ಣ (ಗುಪ್ತ ಮಂಚಣ್ಣ) ೩. ಶಿವಲೆಂಕ ಮಂಚಣ್ಣ ಇವರು ಮೂವರೂ ಕಾಯಕ ಜೀವಿಗಳು ಸಾಧನೆಯಲ್ಲಿ ಬೇರೆ ಬೇರೆ ಮಾರ್ಗವನ್ನು ಅನುಸರಿಸಿದ್ದರು. ಕೊಂಡೆಯ ಮಂಚಣ್ಣ ಕಲ್ಯಾಣದ ರಾಜ ಬಿಜ್ಜಳನ ಆಸ್ಥಾನದಲ್ಲಿ ಗುಪ್ತ ಕಾರ್ಯದರ್ಶಿಯಂತಿದ್ದನು. ಈತನು ಬಸವಣ್ಣನವರ ವಿರುದ್ಧ ರಾಜನಿಗೆ ಚಾಡಿ ಹೇಳುತ್ತಿದ್ದನೆಂದು ಜನರು ತಿಳಿದಿದ್ದರು. ಆದರೆ ಮಂಚಣ್ಣ ಬಸವಣ್ಣನವರ ಗೂಢಾಚಾರಿಯಂತೆ ಬಸವಣ್ಣನ ಕೆಲಸಗಳಲ್ಲಿ ಸಹಾಯ ಮಾಡುತ್ತಿದ್ದವನೆಂದು ಅಮರ ಗಣಾಧೀಶ್ವರ ಚರಿತ್ರೆ, ಶರಣಲೀಲಾಮೃತ, ಭೈರವೇಶ್ವರ ಕಾವ್ಯದ ಕಥಾಮಣಿ, ಸೂತ್ರ ರತ್ನಾಕರ, ಶಿವಶರಣರ ಕಥಾರತ್ನಕೋಶದಲ್ಲಿ ಹೇಳಲ್ಪಟ್ಟಿದೆ. ಇದಲ್ಲದೆ, ಲಕ್ಕಣ ದಂಡೇಶನ ಶಿವತತ್ವ ಚಿಂತಾಮಣಿ ಪಂಡಿತಾರಾಧ್ಯ ಚರಿತ್ರೆ, ಸಿಂಗಿರಾಜ ಪುರಾಣ ಮುಂತಾದವುಗಳಲ್ಲಿ ಗುಪ್ತ ಮಂಚಣ್ಣನ ಕಥೆ ವಿಚಾರ ಉಲ್ಲೇಖವಾಗಿದೆ. ಅಂತರಂಗದಲ್ಲಿ ಬಸವಣ್ಣನವರನ್ನು ಆರಾಧಿಸುತ್ತಿದ್ದನೆಂದು ಕೊನೆಗೆ ಬಸವಣ್ಣನ ಕಟ್ಟಾ ಅನುಯಾಯಿಯಾದವನೆಂದು ತಿಳಿದು ಬರುತ್ತದೆ. ಮೇಲ್ಕಂಡ ಎಲ್ಲಾ ಗ್ರಂಥಗಳಲ್ಲಿಯೂ ಕೊಂಡೆಯ ಮಂಚಣ್ಣನೇ ಗುಪ್ತ ಮಂಚಣ್ಣ ಎಂಬುದು ತಿಳಿದುಬರುತ್ತದೆ.

ಇವೆಲ್ಲಕ್ಕಿಂತಲೂ ಮಿಗಿಲಾಗಿ ಅವನ ವಚನಗಳೇ ಅವನ ವ್ಯಕ್ತಿತ್ವವನ್ನು ತಿಳಿದುಕೊಳ್ಳುವಲ್ಲಿ ಸಹಕಾರಿಯಾಗಿದೆ.

ಬಸವಣ್ಣನವರ ಸಮಕಾಲೀನನಾದ ಕೊಂಡೆಯ ಮಂಚಣ್ಣನ ವಚನಗಳ ಅಂಕಿತ "ನಾರಾಯಣ ಪ್ರಿಯ ರಾಮನಾಥ" ಎಂದು ಇವನು ೧೦೨ ವಚನಗಳು ಬರೆದಿದ್ದು ಅವುಗಳು ಸಮಗ್ರ ವಚನ ಸಂಪುಟದಲ್ಲಿ ದಾಖಲಾಗಿವೆ.

ಗುಪ್ತ ಮಂಚಣ್ಣ ವೈಷ್ಣವ ಕುಲದವನೆಂದು ಅವನ ಹೆಂಡತಿ ಲಕ್ಕಮ್ಮನೆಂದು ತಿಳಿದು ಬರುತ್ತದೆ. ಮಂಚಣ್ಣ ವೇದವೇದಾಂತಗಳನ್ನು ಆಗಮ ಪುರಾಣಗಳನ್ನು ಅಭ್ಯಾಸ ಮಾಡಿದ್ದನು. ವೈಷ್ಣವನಾಗಿದ್ದರೂ ಶಿವನ ಶ್ರೇಷ್ಠತೆಯನ್ನು ತಿಳಿದು ಕ್ರಮ ಕ್ರಮವಾಗಿ ಹರಿಭಕ್ತಿಯನ್ನು ತ್ಯಜಿಸಿ ಶಿವಭಕ್ತಿಯನ್ನು ರೂಢಿಸಿಕೊಂಡನೆಂದು ತೋರುತ್ತದೆ.

ಶಿವಭಕ್ತಿಯ ಮಹತ್ವ ತಿಳಿದ ಮೇಲೆ ವೈಷ್ಣವ ಮತವನ್ನು ತ್ಯಜಿಸಿ ವೀರಶೈವ ಆಚಾರಗಳನ್ನು ಅಳವಡಿಸಿಕೊಂಡು ಬಹಿರಂಗವಾಗಿ ತಾನು ವೈಷ್ಣವನೆಂದು ಹೇಳಿಕೊಂಡರೂ ಅಂತರಂಗವಾಗಿ ಲಿಂಗಧಾರಣೆ ಹೊಂದಿ ಶಿವ ಪೂಜೆಯನ್ನು ಮಾಡುತ್ತಿದ್ದನು.

ಒಮ್ಮೆ ಇವನ ಮನೆಯ ಮಾಳಿಗೆ ಮೇಲಿನ ಕಿಟಕಿಯಿಂದ ಧೂಪದ ಹೊಗೆ ಬರುತ್ತಿದ್ದುದನ್ನು ಕಂಡ ವೈಷ್ಣವನೋರ್ವ ಅನುಮಾನಗೊಂಡು ಕಿಂಡಿಯಲ್ಲಿ ನೋಡಲಾಗಿ ಗುಪ್ತಮಂಚಣ್ಣನು ಶಿವಲಿಂಗವನ್ನು ಪೂಜಿಸುತ್ತಿದ್ದುದನ್ನು ನೋಡಿ ಎಲ್ಲರಿಗೂ ತಿಳಿಸುತ್ತಾನೆ. ಅವರೆಲ್ಲರೂ ಬಂದು ಬಾಗಿಲು ತೆರೆದು ನೋಡಲಾಗಿ ಗುಪ್ತ ಮಂಚಣ್ಣನ ಭಕ್ತಿ ಬಯಲಾಗಿ ಕಾರಣ ಕೇಳಲಾಗಿ ಮಂಚಣ್ಣ ದಂಪತಿಗಳು ವೈಷ್ಣವರಿಗೆ ಹೆದರಿ ಪ್ರಾಣತ್ಯಾಗ ಮಾಡುತ್ತಾರೆ. ಈ ವಿಷಯವು ಬಸವಣ್ಣನವರಿಗೆ ತಿಳಿದು ಅಂತ್ಯ ಸಂಸ್ಕಾರ ಮಾಡುವನಿದರಲ್ಲಿ ಬಂದು ಬಸವಣ್ಣ ತನ್ನ ಹಸ್ತಸ್ಪರ್ಶದಿಂದ ದಂಪತಿಗಳನ್ನು ಬದುಕಿಸುತ್ತಾನೆಂದು ಪುರಾಣಗಳು ಹೇಳುತ್ತವೆ. ನಂತರ ಮಂಚಣ್ಣ ಬಹಿರಂಗವಾಗಿಯೇ ಅನುಭವ ಮಂಟಪದ ಕಾರ್ಯಗಳಲ್ಲಿ ಭಾಗವಹಿಸುತ್ತಾನೆ. ಕಡೆಗೆ ಕಲ್ಯಾಣದಲ್ಲಿಯೇ ಸಮಾಧಿಸ್ಥನಾಗುತ್ತಾನೆ.

ವೈಷ್ಣವನಾಗಿದ್ದ ಮಂಚಣ್ಣ ಶಿವಭಕ್ತನಾಗಿ ಕಲ್ಯಾಣದಲ್ಲಿರುವಾಗ ಅವನ ಮಾನಸಿಕ ಸ್ಥಿತಿ ವಿಕಲ್ಪಗೊಂಡಿದ್ದಕ್ಕೆ ವಚನಗಳು ಸಾಕ್ಷಿಯಾಗುತ್ತವೆ. "ಆನು ನಾಮದ ದಾಸನಲ್ಲದೆ ದಾಸೋಹದ ದಾಸನಲ್ಲ ಆನು ಹರಿಭಕ್ತನಲ್ಲದೆ ಶಿವಭಕ್ತನಲ್ಲಯ್ಯ ಎನಗೆ ಶಿವಭಕ್ತನಲ್ಲಯ್ಯ ಎನಗೆ ಶಿವಭಕ್ತಿ ನೆಲೆಗೊಳ್ಳದಯ್ಯ ನೀನೆ ಎನಗೆ ಕೃಪೆ ಮಾಡು ನಾರಾಯಣ ಪ್ರೀಯ ರಾಮನಾಥ" ಎಂದು ಪ್ರಲಾಪಿಸುತ್ತಾನೆ. ಮತ್ತೊಂದು ಕಡೆ "ನಾನು ವಿಶ್ವಾಸಿಯಾದಡೆ ಗುಪ್ತ ಭಕ್ತಿಯ ಮಾಡಲೇಕೆ? ನಾವಿಶ್ವಾಸಿಯಾದಡೆ ಹರಿವೇಷವಂ ಇದಿಲಿಗೆ ಕೊಟ್ಟು ಹರನ ಹರಣದಲ್ಲಿ ಇರಿಸಿದೆನೆಂಬ ಹುಸಿ ಮಾಡಿದ ಗಸಣಿ ಏಕೆ?" ಎಂದು ಕೇಳುತ್ತಾನೆ.

ಕೊಂಡೆಯ ಮಂಚಣ್ಣನು ತನ್ನ ಜನ್ಮ ರಹಸ್ಯವನ್ನು ಈ ಕೆಳಕಂಡ ವಚನದಲ್ಲಿ ಹೇಳಿಕೊಂಡಿದ್ದಾನೆ.

"ಈಶ್ವರ ಲೀಲಾ ಮೂರ್ತಿಯಾಗಿ
ಏಕಾದಶ ರುದ್ರಮೂರ್ತಿಯ ಭಾವಿಸುವಲ್ಲಿ
ವಾದರುದ್ರನ ಕಳುಹಿದ ಬಿಜ್ಜಳನೆಂಬ ನಾಮವ ಕೊಟ್ಟು
ಕಾಲರುದ್ರನ ಕಳುಹಿದ ಭಕ್ತಿ ನಾಮವಕೊಟ್ಟು ಬಸವೇಶ್ವರನ
ಮಾಯಾಕೋಳಾಹಲವೆಂಬ ರುದ್ರನ ಕಳುಹಿದ
ಪ್ರಭುನಾಮವ ಕೊಟ್ಟು
ಮತ್ಸರವೆಂಬ ನಾಮ ಗುಪ್ತ ಗಣೇಶ್ವರನೆಂಬ ನಾಮವ
ತಾಳ್ದು ಒಪ್ಪುದಕ್ಕೆ ಮುನ್ನವೇ ಐಕ್ಯ
ಪ್ರಮಥರುಗಳು ಪ್ರಕಟವ ಮಾಡಲಿಕ್ಕೆ ಬಂದಿತ್ತು
ಎನಗೆ ಮರ್ತ್ಯದ ಭವ

ಭವ ಬಸವನಿಂದ ಹರಿಯುವುದು
ನಾಭಿತ್ತಿದ ಬೆಳೆಯನಗೆ ಫಲ ಬೋಗವನಿತ್ತು
ಎನ್ನ ಅವತಾರ ಭಕ್ತಿ ಇನ್ನೆಂದು ಮೀರದಪ್ಪುದು
ಅಚ್ಯುತ ಪ್ರಿಯ ರಾಮನಾಥ"[೧೬]

ಮೇಲಿನ ವಚನದಲ್ಲಿ ತನ್ನ ಬಗೆ ಮತ್ಸರ ಉಂಟಾಗುವಂತೆ ಮಾಡುವ ಕೊಂಡೆಯ (ಚಾಡಿ) ಹೇಳುವ ಕೇಡು ತನ್ನದಾಗಿತ್ತು ಎಂದು ಹೇಳಿರುವುದನ್ನು ಗಮನಿಸಿದಾಗ ಈ ಗುಪ್ತಗಣೇಶ್ವರನು ಕೊಂಡೆಯ ಮಂಚಣ್ಣನಾಗಿ ಸಾಧನೆಗೈದು ಗುಪ್ತಮಂಚಣ್ಣನೆನಿಸಿಕೊಂಡಿರಬೇಕೆಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ತನ್ನ ಸಮಾಜದ ಸಂಪ್ರದಾಯಗಳನ್ನು ಮೆಟ್ಟಿನಿಂತು ಧೈರ್ಯದಿಂದ ಹೇಳಲಾಗದ ಕಾರಣ ಗುಪ್ತಮಂಚಣ್ಣ ಕೊಂಡೆಯ ಮಂಚಣ್ಣನಾಗಿ ಉಳಿದನು.

"ಕಳಹುಹಾದರಕ್ಕೆ ಗುಪ್ತ
ಶಿವಭಕ್ತ ಸಿವಪೂಜೆ ಶಿವಜ್ಞಾನ ಇಂತಿವಕ್ಕೆ
ಬಾಹಾಕಂಬರವೆ
ಅರಿವುದೊಂದು ಅರುಹಿಸಿಕೊಂಬುದೊಂದು
ಇಂತಿ ಉಭಯ ಸುಖ ಸಂಭಾಷಣೆವಲ್ಲದೆ
ರಟ್ಟೆಯ ಪೂಜೆ ಕರ್ಕಶದನುಭವ
ಡೊಂಬರ ಡೊಳ್ಳೆ ಕೇಳಿ ಬಂದವರೆಲ್ಲರೂ ನಿಂದು ನೋಡಿ
ತಮ್ಮ ಮಂದಿರಕ್ಕೆ ಹೋಹಂತಾಯಿತ್ತು
ಈ ಪಥವ ಸಂದನಾರು ಅರಿಯರು
ನಾರಾಯಣ ಪ್ರಿಯರಾಮನಾಥನಲ್ಲಿ
ತನ್ನ ತಾನೇ ತಿಳಿದ ಶರಣ ಬಲ್ಲ"[೧೭]

ಮೇಲಿನ ವಚನದಲ್ಲಿ ಗುಪ್ತ ಮಂಚಣ್ಣನು ಹೇಳುವುದೇನೆಂದರೆ ಕೆಟ್ಟ ಕೆಲಸಗಳನ್ನು ಕದ್ದು ಮುಚ್ಚಿ ಮಾಡುತ್ತಾರೆ. ಆದರೆ ನನ್ನದೆಂಥ ಪರಿಸ್ಥಿತಿ ನೋಡಿ ಶಿವಭಕ್ತಿಯನ್ನು ಗುಪ್ತವಾಗಿ ಮಾಡಬೇಕಾಗಿ ಬಂದಿದೆ ಪೂಜೆ ಭಕ್ತಿ ಜ್ಞಾನ ಇವುಗಳ ಬಾಹ್ಯಾಡಂಬರವಾಗಬೇಕೆಲ್ಲದಿದ್ದರೂ ಅದು ನನ್ನ ಅಂತರಂಗದಲ್ಲಿ ನಡೆಯುತ್ತಿದ್ದರೂ ಹೇಳಿಕೊಳ್ಳಲಾಗದು ಎಂದು ತನ್ನ ಮನವನ್ನು ಸಂತೈಸಿಕೊಳ್ಳುತ್ತಾನೆ. ತಾನು ಮಾತ್ರಾ, ಕಾಯಾ, ವಾಚಾ, ಮನಸಾ ಗುಪ್ತ ರೀತಿಯಲ್ಲಿ ಭಕ್ತಿ ಮಾಡುತ್ತಾ ಮಹಾದೇವನಿಗೆ ತನ್ನನ್ನು ತಾನೇ ಅರ್ಪಿಕೊಂಡಿದ್ದೇನೆ ಎಂಬುದನ್ನು ಈ ವಚನದಲ್ಲಿ ಹೇಳಿದ್ದಾನೆ.

"ಕೀರ್ತಿಗೆ ಜಗವ ಕೊಂಡಾ ಮಾಡುವಾತ ಭಕ್ತನೆ
ನಿಂದಿಸಿಹರೆಂದು ಅಂಜಿಕೊಂಡಿಪ್ಪವ ತಪಸಿಯಲ್ಲ
ಜಗವ ಮೆಚ್ಚಬೇಕೆಂದು ಮಾಡುವಾತ ಭಕ್ತನಲ್ಲ
ಇಚ್ಚಗೆ ನುಡಿವತ ವಿರಕ್ತನಲ್ಲ
ಇದರಚ್ಚುಗೆ ನಿಮಗೇಕೆ
ನಾರಾಯಣ ಪ್ರಿಯ ರಾಮನಾಥ ಒಚ್ಚತ ನಮ್ಮೊಲ"೧೮

ಕೀರ್ತಿಗಾಗಿ ಸಮಾಜಸೇವೆ ಮಾಡುವಾತ ಭಕ್ತನಲ್ಲ. ದೋಷಣೆಗೆ ಒಳಗಾಗಬೇಕೆಂದು ಹೆದರಿಸಿಕೊಂಡವನು ತಪಸ್ವಿಯಾಗುವುದಿಲ್ಲ ಜಗತ್ತನ್ನು ಮೆಚ್ಚಿಸ ಲೋಸುಗ ಸೇವೆ ಮಾಡುವವನು ಭಕ್ತನಲ್ಲ. ತನ್ನಿಷ್ಟದಂತೆ ತಾನು ನಡೆದು ನುಡಿಯುವವನು ವಿರಕ್ತನಲ್ಲ ಇದರ ಹಂಗು ನನಗೇಕೆಂದರು. ಇವುಗಳಲ್ಲಿ ಉದಾಸೀನದಿಂದ ಕಾಣುವವನನ್ನು ದೇವರು ಮೆಚ್ಚುತ್ತಾನೆ.

"ಚಿನ್ನ ದೊಳಗಣ ಬಣ್ಣದಂತೆ
ಬಣ್ಣ ನುಂಗಿದ ಬಂಗಾರದಂತೆ
ಅನ್ಯ ಭಿನ್ನವಿಲ್ಲದ ಲಿಂಗೈಕ್ಯವು
ಲಿಂಗಾಂಗವಾದಲ್ಲಿ ಅಂಗ ಲಿಂಗವಾದಲ್ಲಿ
ಹಿಂಗದ ಭಾವ ಚಿನ್ನ ಬಣ್ಣದ ತೆರ
ಇದು ಪ್ರಾಣಲಿಂಗ ಯೋಗ ಸ್ವಾನುಭಾವ ಸಮ್ಮತ
ಇದು ಅಂಗಲಿಂಗಯೋಗ ಪ್ರಾಣಲಿಂಗ ಪ್ರಣವ
ಉಭಯನಾಶವ ಐಕ್ಯಲೇಪ
ನಾರಾಯಣಪ್ರಿಯ ರಾಮನಾಥ"೧೯

ಈ ವಚನದಲ್ಲಿ ಗುಪ್ತಮಂಚಣ್ಣನವರು ಹೇಳುವುದೇನೆಂದರೆ ಚಿನ್ನದೊಳಗೆ ಹೊಂಬಣ್ಣ ಇರುವಂತೆ ಬಣ್ಣದೊಳಗೆ ಚಿನ್ನವಿರುವಂತೆ ಇಲ್ಲಿ ಭಿನ್ನ ಭಾವವಿರುವುದಿಲ್ಲ ಅಂಗಲೀನವಾಗಿ ಭಾವ ಚಿನ್ನದಲ್ಲಿ ಬೆರೆತ ಬಣ್ಣದಂತಾಗುತ್ತದೆ. ಇದೇ ಪ್ರಾಣಲಿಂಗಯೋಗ ಇದೇ ಸ್ವಾನುಭಾವ ಇದೇ ಅಂಗಲಿಂಗಯೋಗ ಇದೆ ಪ್ರಾಣಲಿಂಗ ಪ್ರಣವ ಎರಡೂ ಐಕ್ಯದಲ್ಲಿ ನಾಶವಾಗುವುದರಿಂದ ಅನುಭಾವಿಕ ನೆಲೆಯಾಗುತ್ತದೆ ಎನ್ನುತ್ತಾರೆ. ಶರಣ ಕೊಂಡೆಯ ಮಂಚಣ್ಣ ಕೊಂಡೆಯ ಮುಂಚಣ್ಣನು ವೈಷ್ಣವಧರ್ಮವನ್ನು ಬಿಟ್ಟು ಇಷ್ಟು ಪ್ರಾಣ ಭಾವಲಿಂಗಗಳನ್ನು ಅಳವಡಿಸಿಕೊಂಡಂತೆ ತೋರುತ್ತದೆ. ಈ ಒಂದು ವಚನದಲ್ಲಿ ಹಣೆಗೆ ಹಚ್ಚುವತ ನಾಮ ಮತ್ತು ಧರಿಸುವ ಮಣಿಗಳನ್ನು ಆಯಾ ಲಿಂಗಗಳ ಸ್ವರೂಪವನ್ನು ಮಾಡಿದವೆಂದು ವಿವರಿಸುತ್ತಾನೆ.

"ರುದ್ರ ದೈವವಾದಡೆ ಕಪಾಲವ ಹೊತ್ತ ತಿರುಗಲೇಕೆ
ವಿಷ್ಣು ದೈವವಾದಡೆ ದಶಾವತಾರಕ್ಕೊಳಗಾಗಲೇಕೊ
ಬ್ರಹ್ಮ ದೈವವಾದಡೆ ಶಿರವ ಹೋಗಾಡಲೇಕೆ?
ಇಂತೀ ಮೂರು ಅಳಿವಿಂಗೊಳಗು
ಅನಾದಿ ವಿಚ್ಚಕ್ತಿಯ ಅಂಶೀಭೂತ ಮಾಯಿಕ ಸಂಬಂಧ ದೇಹಿಕರು
ಅವತಾರ ಮೂರ್ತಿಗಳಾದ ರಣಜಗದ ದೈವಂಗಳಿವರು
ಇವರ ಬೇದ ದರ್ಪಣದ ಒಳಹೊರಗಿನಂತಪ್ಪ ಬೇದ
ನಿಶ್ಚಯವಂತರು ತಿಳಿದು ನೋಡಿರಣ್ಣ
ತಿಳಿದಡೆ ಇರವು ಉದಕದೊಳಗಣ ವಿಕಾರದಂತೆ
ಭಯಲೊಳಗಣ ಮರೀಚಿಕೆಯಂತೆ ಹಿಂಗವ ವಸ್ತು
ನಾರಾಯಣ ಪ್ರಿಯ ರಾಮನಾಥನಲ್ಲಿ ಗುರುವಿರಹಿತ ಶರಣಂಗೆ"[೨೦]

ರುದ್ರ ದೇವರಾದರೆ ಭಿಕ್ಷಾ ಪಾತ್ರೆಯನ್ನು ಹೊತ್ತು ತಿರುಗಲೇಕೆ. ವಿಷ್ಣು ದೇವರಾದರೆ ದಶಾವತಾರವೆತ್ತಿ ಪ್ರಾಣಿಗಳಾಗಿ ಹುಟ್ಟಿದ್ದೇಕೆ, ಬ್ರಹ್ಮ ದೇವರಾಗಿದ್ದರೆ ಅವನ ತಲೆಯನ್ನು ಕಳೆದು ಕೊಳ್ಳುತ್ತಿದ್ದೇನೆ? ಅವರೆಲ್ಲರು ಅಳಿದು ಹೋಗುವ ವಸ್ತುವಿನಂತೆ ಅನಾದಿ ಬೆಚ್ಚಕ್ತಿಯ ಅಂಶಿಭೂತರಾದ ಇವರು ಕೇವಲ ನೆಪ ಮಾತ್ರರು ತಿಳಿದು ನೋಡಲಾಗಿ ಹೊರಗಡೆ ಕಾಣುವ ಮರೀಚಿಕೆಯಂತೆ ನೀರಿನೊಳಗಣ ವಿಚಿತ್ರ ಬಿಂಬದಂತೆ ಆದರೆ ಶರಣರು ಯಾವುದೇ ರೂಪ ರಸ ಗಂಧವಿಲ್ಲದವರು ನಿರ್ಲಿಪ್ತರು ಎನ್ನುತ್ತಾನೆ ಮಂಚಣ್ಣ

"ಲಿಂಗ ಪೂಜೆಯ ಮಾಡುವಲ್ಲಿ
ಮನಗುರಿಯ ತಾಗಿದ ಕೋಲಿನಂತಿರಬೇಕು
ಶಿವಲಿಂಗ ಪೂಜೆಯ ಮಾಡುವಲ್ಲಿ
ಶ್ರವಕ್ಕೆ ಸಂಜೀವನ ಹುಟ್ಟಿದಂತಿರಬೇಕು
ಹೀಗಲ್ಲದೆ ಪೂಜೆಯಲ್ಲ
ಒಳಗಣ ಹುಳುಕು ಮೇಲಕ್ಕೆ ನಯವುಂಟೆ
ಆ ತರು ಒಣಗುವುದವಲ್ಲದೆ
ಇಂತಿ ಬರುಬರ ಅರ್ಚನೆ ಹುರಿಯ ಬೊಂಬೆಯಂತೆ
ಇಂತೀ ಅಗಿಗುರಿಗಳ ಪೂಜೆ ಬರುಕತೆಯಂತೆ
ನಾರಾಯಣ ಪ್ರಿಯ ರಾಮನಾಥ"[೨೧]

ಲಿಂಗ ಪೂಜೆಯ ಮಾಡುವಾಗ ಮನಸ್ಸು ಒಂದೇ ಗುರಿಯನ್ನು ಮುಟ್ಟುವಂತಿರಬೇಕು ಶಿವಲಿಂಗ ಪೂಜೆಯು ಮಾಡುವಲ್ಲಿ ಶವಕ್ಕೆ ಸಂಜೀವಿನಿ ನೀಡಿ ಪುನಃ ಜೀವ ಪಡೆಯುವಂತಿರಬೇಕು ಹೀಗಿಲ್ಲದಿದ್ದರೆ ಹೊರಗೆ ತೋರಿಕೆಯ ಪೂಜೆಯಾಗುವುದು ಒಳಗೆ ಹುಳುಕು ತುಂಬಿದಂತಾಗುವುದು, ಈ ರೀತಿಯಾಗಿ ನಮ್ಮ ಪೂಜೆ ಕೇವಲ ಬೊಂಬೆಯಂತೆ ತೋರಬಾರದು ಎಂಬು ಪೂಜೆಯ ಮಹತ್ವವನ್ನು ವಿವರಿಸಿದ್ದಾರೆ.

"ವೇದ ಪ್ರಣವದ ಶೇಷ
ಶಾಸ್ತ್ರ ಸಂಕಲ್ಪದ ಸಂದು
ಪುರಾಣ ಪುಣ್ಯದ ತಪ್ಪಲು
ಇಂತಿ ವೇದಶಾಸ್ತ್ರ ಪುರಾಣ ಆಗಮಂಗಳಲ್ಲಿ
ವಾದಕ್ಕೆ ಹೋರುವ ವಾಗ್ವಾದಿಗಳು
ಬೇದವನರಿಯದೆ ಹೋರಲೇಕೆ
ಬೆಲ್ಲದ ಮದ್ದಡೆ ಕಹಿಯೇ–ಸಿಹಿಯೇ
ಎಂಬುದನರಿತಾಗ
ಆವ ಬಳಿಕೆಯಲ್ಲಿದ್ದರೂ ದೇವನ ಕಲೆಯನರಿತಲ್ಲಿ
ಆವ ಲೇಪವೂ ಇಲ್ಲ
ನಾರಾಯಣ ಪ್ರಿಯ ರಾಮನಾಥ"[೨೨]

ವೇದಗಳು ಪ್ರಣವದಲ್ಲಿ ಹುದುಗಿ ಹೋಗಿವೆ. ಶಾಸ್ತ್ರಗಳು ವಿಕಲ್ಪದಲ್ಲಿ ನಲುಗಿ ಹೋಗಿವೆ. ಪುರಾಣಗಳು ಪುಣ್ಯವನರಸುತ್ತಾ ಹೋಗಿದೆ. ಈ ವೇದಶಾಸ್ತ್ರ ಆಗಮಗಳಲ್ಲಿ ವಾದ ಮಾಡುವವರು ಅವುಗಳ ಬೇದವನರಿಯದೆ ದಾರಿತಪ್ಪಿ ಬೇವಿನ ಮರದ ಹತ್ತಿ ಬೆಲ್ಲವ ತಿಂದು ಕಹಿಯೋ ಸಿಹಿಯೋ ಎಂಬುದು ತಿಳಿಯದಂತಾಗುವರು. ಏನಾದರೂ ದೇವರ ಮರ್ಮವನ್ನು ಅರಿತವನಿಗೆ ಯಾವ ಲೋಪವು ಇಲ್ಲ ಎನ್ನುತ್ತಾರೆ.

ಹೀಗೆ ಕೊಂಡೆಯ ಮಂಚಣ್ಣ (ಗುಪ್ತಮಂಚಣ್ಣ) ತಮ್ಮ ಅನುಭವವನ್ನು ವಚನಗಳನ್ನು ಹೇಳಿಕೊಂಡಿದ್ದಾರೆ. ಕೊಂಡೆಯ ಮಂಚಣ್ಣ (ಚಾಡಿಯ) ಮಂಚಣ್ಣನಲ್ಲಿ ಶಿವಭಕ್ತ ಮಂಚಣ್ಣನಿರುವುದನ್ನು ಸಾದರ ಪಡಿಸುತ್ತಾರೆ.

**೩.೫. ಮಾದಾರ ಚೆನ್ನಯ್ಯ**

ಮಾದಾರ ಚೆನ್ನಯ್ಯನು ಬಸವಣ್ಣನಿಗಿಂತ ಪ್ರಾಚೀನವಾದ ಒಬ್ಬ ಶರಣ ಎಂದು

ಬಿಟ್ಟರೆ ಅವನ ಹೋರಾಟದ ಜೀವನದ ಸ್ವರೂಪವನ್ನಾಗಲಿ, ಆ ಜೀವನ ಕಂಡುಕೊಂಡ ದರ್ಶನವನ್ನಾಗಲೀ, ಮನಗಂಡಂತಾಗುವುದಿಲ್ಲ. ಅಥವಾ ಕಕ್ಕಯ್ಯ, ಚೆನ್ನಯ್ಯರಂಥ ಹೊಲೆ ಮಾದಿಗರಿಗೆ ಶರಣರು ಸಮಾನತೆಯನ್ನು ತಂದುಕೊಟ್ಟರು ಎಂದೇನಾದರೂ ತಿಳಿಯುವುದಾದರೆ ಅದೊಂದು ಕೇವಲ ದಾಕ್ಷಿಣ್ಯದ ಮಾತಷ್ಟೇ ಆಗಿದ್ದರೆ ಪರವಾಗಿರಲಿಲ್ಲ. ಬದಲಾಗಿ ಅದು ವಾಸ್ತವ ಚರಿತ್ರೆಯ ಮೇಲೆ ಎಸಗಿದ ನಯ ನಾಜೂಕಿನ ಅಪಚಾರವೆನಿಸುತ್ತದೆ. ಏಕೆಂದರೆ ಚನ್ನಯ್ಯ ಕಕ್ಕಯ್ಯರಂಥ ಶರಣರು ಶರಣ ಧರ್ಮದಲ್ಲಿ ತಮ್ಮ ಸಮಾನತೆ ಸ್ವಾಬಿಮಾನಗಳನ್ನು ಅನ್ಯ ಯಾರಿಂದಲೋ ಬೇಡಿ ಪಡೆಯದೆ, ಪ್ರಾಚೀನ ಶರಣ ಧರ್ಮದ ಪರಂಪರೆಯಲ್ಲೇ ಬೆಳೆದು ಬಂದಿರುವ ಪಣ ತೊಟ್ಟು ಬದುಕುವ ಛಾಂಥಲ್ಯದ ಜೀವನದಿಂದಲೂ ನಿಜಧಮನಿಗಳಲ್ಲೆ ಸಂಚಯವಾದ ದಿಟ್ಟ ಹೋರಾಟದ ಪ್ರವೃತ್ತಿಯಿಂದಲೂ ತಮ್ಮ ಸ್ವ ಮರ್ಯಾದೆಯನ್ನು ಸಮಾನತೆಯನ್ನು ಗಳಿಸಿಕೊಂಡವರಾಗಿದ್ದಾರೆ. ತಮ್ಮ ಸಾಂಸ್ಕೃತಿಕ, ಸಾರ್ವಜನಿಕ ಜೀವನದ ಧ್ಯೇಯವೇನೆಂಬುದನ್ನು ಸ್ಪಷ್ಟಪಡಿಸಿಕೊಳ್ಳುವುದು ಅಲ್ಲಮನಿಗಾಗಲಿ, ಬಸವಣ್ಣನಿಗಾಗಲಿ ಕಷ್ಟ ಸಾಧ್ಯವಾದುದಲ್ಲ, ಅಷ್ಟೇ ಅಲ್ಲ ಅಕ್ಕನಂಥ ಒಬ್ಬ ಹೆಣ್ಣಿಗೂ ಅದು ಕಷ್ಟ ಸಾಧ್ಯವಾದುದಷ್ಟೇ ಅಲ್ಲ ಅದು ಸಾಧ್ಯವೇ ಇಲ್ಲದ ಮಾತು, ಇದರ ಜೊತೆಗೆ, ಇನ್ನೆಷ್ಟು ವ್ಯಾಪಕವಾದ ಅರ್ಥ ಕೊಡುವ ಇನ್ನೊಂದು ಅಭಿಪ್ರಾಯವನ್ನೂ ಇಲ್ಲಿ ಹೇಳುವುದಾದರೆ, ಬಸವಪೂರ್ವದ ಪ್ರಾಚೀನ ಶರಣ ಧರ್ಮದ ಮುನ್ನೆಡೆಗೆ ಕಾರಣ ಪುರುಷರೂ ನಂತರದ ತಲೆಮಾರಿಗೆ ಸ್ಮರಣಾರ್ಹರೂ ಆಗಿರುವ ಹಿರಿಯ ತಲೆಮಾರಿನ ಶರಣರೆಂದರೆ, ಹುಲ್ಲು ಮಾರಿಕೊಂಡು, ಜೋಡು ಹೊಲಿದುಕೊಂಡು, ಮೀನು ಮಾರಿಕೊಂಡು, ಅವರಿವರ ಬಟ್ಟೆ ಒಗೆದುಕೊಂಡು, ಎಣ್ಣೆಗಾಣ ಹೊಡದುಕೊಂಡು ಜೀವಿಸಿದ ಸಾಮಾನ್ಯರಲ್ಲೇ ಅತಿ ಸಾಮಾನ್ಯರು ಅಥವಾ ಇದನ್ನೇ ಇನ್ನೂ ಸರಿಯಾಗಿ ಹೇಳಬೇಕೆಂದರೆ ಇವರು ಸಾಮಾನ್ಯರೂ ಅಲ್ಲ. ಇವರು ಏನೇನೂ ಗತಿಯಿಲ್ಲದ ನಿರ್ಗತಿಕರು. ಆದರೆ ಆ ನಿರ್ಗತಿಕರಲ್ಲೂ ನಿಕೃಷ್ಟನಾದವನು. ಮಾದಾರ ಚೆನ್ನಯ್ಯ ಎಂಬುದೇ ಇಲ್ಲಿ ಮನಗಾಣಬೇಕಾಗಿರುವ ಬಹುದೊಡ್ಡ ವಿಚಾರ, ಏಕೆಂದರೆ ಈ ನಿಕೃಷ್ಟ ಮಾನವನ ವೈದಿಕ ವ್ಯವಸ್ಥೆಯಲ್ಲಿ ಅಕ್ಷರಸ್ಥನಾಗುವುದು ಸುಲಭದ ಮಾತಲ್ಲ; ಪ್ರಜ್ಞಾವಂತನೆನಿಸುವುದು ತೀರಾ ಸರಳವಾದ ಸಂಗತಿಯಲ್ಲ ಇವೆರಡಕ್ಕಿಂತಲೂ ಮುಖ್ಯವಾದ ಸಂಗತಿ ಎಂದರೆ ಅಭಿವ್ಯಕ್ತಿ ಜಾಣ್ಮೆವುಳ್ಳ ಒಬ್ಬ ವಿಚಾರವಂತನೆನಿಸುವುದು ಸಾಧ್ಯವೇ ಇಲ್ಲ. ಸಾಧ್ಯವಾದಲ್ಲಿ ಸಮಾಜ ಅದನ್ನು ಸಹಿಸುವಂತಿಲ್ಲ ಬಹುಶಃ ಈ ಹಿನ್ನೆಲೆಯಿಂದ ನೋಡಿದಾಗ ಅತ್ಯಂತ ನಿಕೃಷ್ಟನೆನಿಸಿ ಜೋಡುಗಳನ್ನು ಹೊಲಿದ ಚೆನ್ನಯ್ಯನ ಕೈ, ಲೇಖನಿಯನ್ನೂ ಹಿಡಿದು ವಚನಗಳನ್ನು ರಚಿಸಬೇಕಾದರೆ, ಅವನು ಮೆಟ್ಟಿರಬಹುದಾದ ಪ್ರಬುದ್ಧತೆಯ ಮಟ್ಟವನ್ನೂ ಜೋಡು ಹೊಲಿಯುವುದರಿಂದ ಹಿಡಿದು ಧರ್ಮ ಜಿಜ್ಞಾಸೆಯವರೆಗಿನ ಅವನ ಜೀವನಾನುಭವದ ಆಳ ಎತ್ತರಗಳನ್ನೂ ಸುಲಭವಾಗಿ ಕಲ್ಪಿಸಿಕೊಳ್ಳಬಹುದೆಂದು ತೋರುತ್ತದೆ.

ಮಾದಾರ ಚೆನ್ನಯ ಕಾಯಕದ ಬಗ್ಗೆ ಈ ರೀತಿಯಾಗಿ ಹೇಳಿದ್ದಾರೆ.

"ಸಾಂಖ್ಯಶ್ವಪಚ ಆಗಸ್ತ್ಯ ಕಬ್ಬಿಲ ದುರ್ವಾಸ
ಮಚಿಗ, ದಧೀಚಿ, ಕೀಲಿಗ, ಕಶ್ಯಪ, ಕಮ್ಮಾರ
ರೋಮಜ, ಕಂಚುಗಾರ, ಕಾಂಡಿಲ್ಯನಾವಿಂದ
ಎಂಬುದನರಿದು ಮತ್ತೆ ಕುಲವುಂಟೆಂದು
ಛಲಕ್ಕೆ ಹೋರಲೇತಕ್ಕೆ
ಇಂತೀ ಸಪ್ತ ಋಷಿಯರುಗಳೆಲ್ಲಾ ಸತ್ಯದಿಂದೆ
ಮುಕ್ತರಾದುದನರಿಯದೆ ಅಸತ್ಯದಲ್ಲಿ ನಡೆದು
ವಿಪ್ರರು ನಾವು ಘನವೆಂದು ಹೋರುವ
ಹೊತ್ತು ಹೋಕರ ಮಾತೇಕೆ? ಕಾಯುಳಿಕತ್ತಿ
ಅಡೆಗುಂಟಕ್ಕಡಿಯಾದಬೇಡ
ಅರಿನಿಜಾತ್ಮರಾಮನಾಮನಾ"[೨೩]

ಮಾದಾರ ಚೆನ್ನಯ್ಯನ ಈ ವಚನದಲ್ಲಿ ವೈದಿಕ ಋಷಿಗಳ ಅಥವಾ ಶಾಸ್ತ್ರ ಕರ್ತರ ಮೂಲವನ್ನೇ ಪ್ರಶ್ನಿಸುವುದರ ಹಿಂದಿರುವ ಮನೋಧರ್ಮವನ್ನೂ ಮತ್ತು ಅದರೊಡನೆ ಹೋರಾಡುತ್ತಿರುವ ಒಂದು ತಾತ್ವಿಕ ವಿಚಾರವನ್ನೂ ಅರಿಯಬೇಕು, ಚೆನ್ನಯ್ಯ ಮತ್ತೊಂದೆಡೆ ಹೇಳುತ್ತಾನೆ.

"ವೇದಶಾಸ್ತ್ರಕ್ಕೆ ಹಾರುವನಾಗಿ
ವೀರವಿತರಣಕ್ಕೆ ಕ್ಷತ್ರಿಯನಾಗಿ
ಸರ್ವ ನಾರೈದು ನೋಡುವಲ್ಲಿ ವೈಶ್ಯನಾಗಿ ವ್ಯಾಡಾರದೊಳಗಾಗಿ
ಕೃಷಿಯ ಮಾಡುವುದಕ್ಕೆ ಶೂದ್ರನಾಗಿ
ಇಂತೀ ಜಾತಿ ಗೋತ್ರದೊಳಗಾದ ನೀಚ ಶ್ರೇಷ್ಠನೆಂಬ
ಎರಡು ಕುಲವಲ್ಲದೆ
ಹೊಲೆ ಹದಿನೆಂಟು ಜಾತಿಯೆಂಬ ಕುಲವಿಲ್ಲ
ಬ್ರಹ್ಮವನರಿದಲ್ಲಿ ಬ್ರಾಹ್ಮಣ
ಸರ್ವ ಜೀವಹತಕರ್ಮಕ್ಕೊಳಗಾಗಿದ್ದಲ್ಲಿ ಸಮಗಾರ
ಈ ಉಭಯವನರಿದು ಮರೆಯಲಿಲ್ಲ

ಕೈಯುಳಿ ಕತ್ತಿ ಅಡೆಗುಂಟಕ್ಕಡಿಯಾಗಬೇಡ

ಅರಿನಿದಾತ್ಮ ರಾಮಾನಾಮನಾ"೨೪

ಮೇಲೆ ಹೇಳಿರುವ ತನ್ನ ಎರಡು ವಚನಗಳಲ್ಲೂ ಚೆನ್ನಯ್ಯ ಎತ್ತಿಕೊಂಡಿರುವುದು ತುಂಬಾ ಸರಳವಾದ ವಿಚಾರ ಸರ್ವಜ್ಞಾನವನ್ನೂ ಹೊಂದಲು ಅಥವಾ ಬ್ರಹ್ಮವನ್ನೆಲ್ಲಾ ಅರಿಯಲು ಬ್ರಾಹ್ಮಣನೆಂಬ ಜಾತಿ ಯಾಕೆ ಬೇಕು? ಜಾತಿಯಲ್ಲಿ ಬ್ರಾಹ್ಮಣನಾಗಿದ್ದು ವ್ಯಕ್ತಿ ಚಾರಿತ್ರ್ಯದಲ್ಲಿ ನೀಚನಾದರೆ ಬ್ರಾಹ್ಮಣನೆಂಬುದರ ಅರ್ಥವೇನು. ಅದೇ ಇನ್ನೊಬ್ಬ ಜಾತಿಯಲ್ಲಿ ಹೊಲೆಮಾದಿಗನಾಗಿದ್ದು ವ್ಯಕ್ತಿ ಚಾರಿತ್ರ್ಯದಲ್ಲಿ ಶ್ರೇಷ್ಠನೆನಿಸಿದ್ದರೆ ಹೊಲೆ ಮಾದಿಗರು ಕೀಳೆಂಬ ತರ್ಕಕ್ಕೆ ತಳವೆಲ್ಲಿವೆ? ಹೀಗೆ ಈ ವಿಚಾರದಿಂದಲೂ ವಂಚಿತರಾದವರನ್ನು ಜೋಡು ಹೊಲೆಯುವ ಕೈಯುಳಿ ಕತ್ತಿ ಮತ್ತು ಜೋಡಿನ ಅಡಿಗುಂಟಕ್ಕೂ ಕಡೆಯಾದವರು ಎನ್ನುತ್ತಾನೆ. ಚೆನ್ನಯ್ಯ ಆದರೆ ಹಾಗೆ ಅವರನ್ನು ಕಡೆಗಣಿಸುವಷ್ಟಕ್ಕೆ ಈ ವಚನದ ಅರ್ಥ ನಿಂತು ಬಿಡುವುದಿಲ್ಲವೆಂಬುದನ್ನು ಎಚ್ಚರದಿಂದ ಲಕ್ಷಿಸಬೇಕು. ಏಕೆಂದರೆ ಕೈಯುಳಿ, ಕತ್ತಿ ಅಡೆಗುಂಟಕ್ಕಡಿಯಾಗಬೇಡ ಎಂಬ ಚೆನ್ನಯ್ಯ ಹಾಗೆ ಅಡಿಯಾಳಾಗಿ ಆ ಸ್ಥಿತಿಯಲ್ಲಿರುವವನನ್ನು "ಅರಿನಿಜಾತ್ಮ ರಾಮ ನಾಮನು" ಎಂದು ಮೇಲೆತ್ತಿಕೊಳ್ಳುತ್ತಾನೆ. ಅಲ್ಲದೆ ಸಮಸ್ತ ಮಾನವ ಸಮುದಾಯವನ್ನು ಕೇವಲ ಗುಣಗಳ ಆದಾರದ ಮೇಲೆ ಉಚ್ಚ ಅಥವಾ ನೀಚನೆಂಬ ಗುಣವಾಚಕಗಳಿಂದ ಕರೆಯಬಹುದೇ ಹೊರತು. ಬ್ರಾಹ್ಮಣ ಅಥವಾ ಹೊಲೆಯನೆಂಬ ಜಾತಿ ಕಾರಣದಿಂದಲ್ಲವೆಂದು ಚೆನ್ನಯ್ಯ ಸ್ಪಷ್ಟಪಡಿಸುತ್ತಾನೆ. ಈ ನಡಾವಳಿಯಲ್ಲಿ ಮುಂದುವರಿದ ಶರಣರು ಎತ್ತಿ ಹಿಡಿದ ಒಂದು ಉನ್ನತ ಸಾಮಾಜಿಕ ಆದರ್ಶದ ಅರಿವು ಕಾಲಾಕಾಲದ ಶರಣರ ವಚನಗಳಲ್ಲಿ ಎಷ್ಟೊಂದು ತೀವ್ರಗತಿಯಲ್ಲಿ ಮುಂದೆ ಸಾಗಿದೆ ಎಂಬುದನ್ನು ವಚನಗಳಲ್ಲಿ ಕಾಣಬಹುದಾಗಿದೆ.

"ಕಾಯಕದ ಸುಳುಹನ್ನಕ್ಕ

ಕರ್ಮಪೂಜೆ ಬೇಕೆಂಬರು

ಜೀವನ ಸಂಚಾರವುಳ್ಳನ್ನಕ್ಕ

ಜ್ಞಾನವರಿಯಬೇಕೆಂಬರು

ಜ್ಞಾನ ಧ್ಯಾನಿಸಿ ಕಾಬಲ್ಲಿ

ಕಾಯಕದ ಕರ್ಮದಿಂದ ಮುಕ್ತಿಯೋ?

ಜೀವನ ಜ್ಞಾನದಿಂದ ಮುಕ್ತಿಯೋ?

ಜ್ಞಾನ ಧ್ಯಾನದಿಂದ ಮುಕ್ತಿಯೋ?

ಧ್ಯಾನಿಸಿ ಕಾಲ ಕುರುಹ

ಎನಗೊಂದು ಬಾರಿ ತೋರಾ

ಕೈಯುಳಿಗತ್ತಿ ಅಡೆಗುಂಟಕ್ಕಡಿಯಾಗಬೇಡ

ಅರಿನಿಜಾತ್ಮ ರಾಮನಾಮನ"[೨೫]

ಈ ಇಡೀ ವಚನ ಧ್ಯಾನ ಎಂಬ ಒಂದು ಅಮೂರ್ತ ವಸ್ತುವಿನ ಸುತ್ತಲೂ ಸುತ್ತುವರಿದಿದೆ. ಎರಡನೆಯದಾಗಿ ವಚನದ ಪ್ರತಿಯೊಂದು ಮಾತು ಕೂಡ ಧ್ಯಾನದ ಅಮೂರ್ತತೆಯನ್ನು ಮೂರ್ತಗೊಳಿಸಲು ನಿಯತವಾಗಿ ಶ್ರಮಿಸುತ್ತಿರುವುದು ಗಮನಾರ್ಹ. ಮೂರನೆಯದಾಗಿ ಧ್ಯಾನ ಎಂಬ ಬಹುಗಹನವಾದ ವಸ್ತುವನ್ನು ಧರಿಸುವ ಈ ವಚನ, ಒಂದು ವ್ಯಕ್ತಿ ಇನ್ನೊಂದು ವ್ಯಕ್ತಿಗೆ ಒಂದು ಸುದ್ಧಿಯನ್ನು ಅತ್ಯಂತ ಕಡಿಮೆ ಮಾತುಗಳಲ್ಲಿ ಹೇಳಿದ ರೀತಿಯಲ್ಲಿ, ಹೇಳಲಾಗಿರುವ ಕಲಾತ್ಮಕತೆ ವಚನಕ್ಕೆ ತನ್ನ ತಾನೇ ಪ್ರಾಪ್ತವಾಗಿರುವುದನ್ನು ಗಮನಿಸಬೇಕು. ಇವೆಲ್ಲಕ್ಕಿಂತಲೂ ಮುಖ್ಯವೆನಿಸುವ ಇನ್ನೊಂದು ಸಂಗತಿ ಎಂದರೆ ವಚನದಲ್ಲಿ ಧ್ಯಾನವನ್ನು ಕುರಿತು ಮಾತನಾಡುತ್ತಿರುವ. ಈ ಸಂದರ್ಭದಲ್ಲಿ ಕ್ರಿಯಾರಹಿತವಾದ ಬಲಿಯ ಧ್ಯಾನದಿಂದ ಮಾನವ ಜ್ಞಾನಿಯಾಗಲು ಸಾಧ್ಯವಿಲ್ಲ ಎಂಬ ಅರ್ಥವನ್ನು ವಚನದಲ್ಲಿ ನಿಗೂಢವಾಗಿ ಅಡಗಿಸುವಲ್ಲಿ ಸ್ವತಃ ಮಾದಾರ ಚೆನ್ನಯ್ಯನ ಧ್ಯಾನದ ಸಮತ್ಕಚತೆಯಲ್ಲಿ ಕಾಣಬಹುದಾಗಿದೆ. ಅಲ್ಲದೆ ವಚನಗೊಳಗಿನ ಧ್ಯಾನ ಹಾಗೂ ಜ್ಞಾನ ಎಂಬೆರಡು ನಾಮ ಪದಗಳ ಪುರನರುಕ್ತಿಯಿಂದಲೂ ವಚನದ ಸಾಲು ಸಾಲಿನ ಕೊನೆಯಲ್ಲೂ ಪುನಾರಾವರ್ತನೆಗೊಂಡಿರುವ ಪ್ರಶ್ನಾವಳಿಯಿಂದಲೂ ಇಡೀ ವಚನ ತುಂಬಿ ಕೊಂಡಿರುವುದರಿಂದ ಮೇಲೆ ಸೂಚಿಸಿರುವ ನಿಗೂಢಾರ್ಥ ಅಕ್ಷರಸಃ ನಿಗೂಢವಾಗಿಯೇ ಅಡಗಿದ್ದು ತನ್ಮೂಲಕ ವಚನಕ್ಕೆ ಸಾವಯವ ಶಿಲ್ಪವೂ ಸಾಹಿತ್ಯಿಕ ಸೌಂದರ್ಯವೂ ತಂತಾನೇ ಪ್ರಾಪ್ತವಾದಂತಾಗಿದೆ.

ಹೀಗೆ ಬಸವಣ್ಣ ಸಮಾಜ ಸೇವಾಕಾರ್ಯದಲ್ಲಿ ತೊಡಗಿದರೆ ಹಾವಿನಹಾಳ ಕಲ್ಲಯ್ಯ. ಕರಕುಶಲ ಕಲೆಯಲ್ಲಿ ನಿಪುಣನಾದರೂ ಶಿವಭಕ್ತನಾಗಿದ್ದ. ಭಕ್ತಿಜ್ಞಾನ ಪೂಜೆ ಅರಿವಿನ ಬೀಜವನ್ನು ಸಮಾಜದ ಎಲ್ಲಾ ಜನರಿಗೂ ತಲುಪಿಸಿದವರು ಈ ಶರಣರು. ಮೇಲೆ ಚರ್ಚಿಸಿದ ಎಲ್ಲ ಶರಣರ ವ್ಯಕ್ತಿತ್ವ ವೃತ್ತಿ ಹಾಗೂ ತಾತ್ವಿಕತೆಯನ್ನು ಗಮನಿಸಿದಾಗ ತಾವು ಮಾಡುವ ವೃತ್ತಿ ಹಾಗೂ ವೃತ್ತಿ ಪರಿಕರಗಳನ್ನು ಆಧ್ಯಾತ್ಮದ ಅನುಭೂತಿಗೆ ಬಳಸಿಕೊಳ್ಳುವುದು ಪ್ರಮುಖವಾಗಿ ಕಾಣುತ್ತದೆ. ವೃತ್ತಿ ನಿರತ ಶರಣರಿಗೆ ಸ್ಥಾವರವೆಂಬುದು ನಿರಾಕರಿಸುವ ಸಂಗತಿಯಲ್ಲ. ಸ್ಥಾವರದ ಮೂಲಕವೇ ಜಂಗಮವನ್ನು ಕಟ್ಟಿಕೊಳ್ಳುವ ವಿಭಿನ್ನ ನೆಲೆಯನ್ನು ಕಾಣುತ್ತೇವೆ. ಉಳಿ, ಕೊಡತಿ, ಬಾಚಿ, ಅಳತೆ ಇತ್ಯಾದಿ, ಸಂಗತಿಗಳೇ ಸಾಧನೆ ಹಾಗೂ ಅನುಭವದ ಅಭಿವ್ಯಕ್ತಿಯ ಸ್ವರೂಪ ಪಡೆಯುತ್ತವೆ. ಬಾಚಿಕಾಯಕದ ಬಸವಯ್ಯನಲ್ಲಿಯೂ ಈ ನೆಲೆಯನ್ನು ಕಾಣುತ್ತೇವೆ. ಹೀಗಾಗಿ ಈ ವಚನಕಾರರ ಮೂಲಕ ಅಧ್ಯಯನಕ್ಕೆ ಬೇಕಾದ ನೆಲೆಗಟ್ಟನ್ನು ಇಲ್ಲಿ ರೂಪಿಸಿಕೊಳ್ಳಲಾಗಿದೆ.

**ಅಡಿ ಟಿಪ್ಪಣಿಗಳು**

೧. ಕಲಬುರ್ಗಿ ಎಂ.ಎಂ., (ಸಂ), ಬಸವಣ್ಣನವರ ವಚನ ಸಂಪುಟ, ವಚನ–೨೯೨.ಪು–೯೪

೨. ಅದೇ, ವ–೩೯೭, ಪು–೯೬

೩. ಅದೇ ವ–೧೦೪, ಪು–೨೯

೪. ಅದೇ, ವ–೪೭, ಪು–೧೫

೫. ಅದೇ, ವ–೪೭, ಪು––೧೫

೬. ಅದೇ, ವ–೬೩, ಪು–೧೮

೭. ಡಾ. ವಿದ್ಯಾಶಂಕರ.ಎಸ್., (ಸಂ) ಸಂಕೀರ್ಣ ವಚನ ಸಂಪುಟ–೨, ವ–೪, ಪುಟ–೨೧

೮. ಅದೇ, ವ,–೨ ಪು–೩೦

೯. ಡಾ. ಹಿರೇಮಠ.ಬಿ.ಆರ್., (ಸಂ), ಸಂಕೀರ್ಣ ವಚನ ಸಂಪುಟ, ವ–೧೧೨೩ ಪು–೩೭೯

೧೦. ಅದೇ, ವ–೧೦೮೯, ಪು–೨೯೮

೧೧. ಅದೇ, ವ–೧೦೯೪, ಪು–೩೬೯

೧೨. ಅದೇ, ವ–೧೧೨೫, ಪು–೩೭೯

೧೩. ಅದೇ, ವ–೧೧೬೩, ಪು–೩೯೫

೧೪. ಅದೇ, ವ–೧೧೧೮, ಪು–೩೭೭

೧೫. ಅದೇ, ವ–೧೧೭೦, ಪು–೩೯೭

೧೬. ಡಾ. ವಿದ್ಯಾಶಂಕರ.ಎಸ್., (ಸಂ) ಸಂಕೀರ್ಣ ವಚನ ಸಂಪುಟ–೨, ವ–೧೧, ಪು–೧೦೧

೧೭. ಅದೇ, ವ–೨೭, ಪು–೧೦೬

೧೮. ಅದೇ, ವ–೩೫, ಪು–೧೦೯

೧೯. ಅದೇ, ವ–೫೧, ಪು–೧೧೩

೨೦. ಅದೇ, ವ–೮೫, ಪು–೧೨೫

೨೧. ಅದೇ, ವ–೮೭, ಪು–೧೨೬

೨೨. ಅದೇ, ವ–೯೨, ಪು–೧೨೮

೨೩. ಡಾ. ಹಿರೇಮಠ .ಬಿ.ಆರ್., (ಸಂ) ಸಂಕೀರ್ಣ ವಚನ ಸಂಪುಟ–೩ ವ–೧೦ ಪು–೪೦೮

೨೪. ಅದೇ, ವ–೭, ಪು–೪೦೭

೨೫. ಅದೇ, ವ–೧, ಪು–೪೦೫

# ಅಧ್ಯಾಯ : ನಾಲ್ಕು

## ಬಾಚಿಕಾಯಕದ ಬಸವಯ್ಯನ ವಚನಗಳ ವಿಶ್ಲೇಷಣೆ

ಬಾಚಿಕಾಯಕದ ಬಸವಣ್ಣನನ್ನು ಕುರಿತು ಸಿಗುವ ಸಂಗತಿಗಳು ತೀರಾ ಅತ್ಯಲ್ಪ, ಮೂಲತಃ ಆತನು ವಿಶ್ವಕರ್ಮನಾಗಿದ್ದು ಬಡಗಿ ಕೆಲಸ ಮಾಡುತ್ತಿದ್ದನು. ಈತನು ತನ್ನ ಕಾಯಕದಲ್ಲಿ ನಿರತನಾಗಲು ಬಸವಣ್ಣನವರೇ ಕಾರಣ ಎಂದು ಹೇಳಿಕೊಂಡಿದ್ದಾನೆ. ಅವನ ವಚನಗಳಲ್ಲಿ ಬಾಚಿ, ಉಳಿ, ಕೊಡತಿ ಇವುಗಳ ಪ್ರಸ್ತಾಪ ಬರುತ್ತದೆ. ಇದರಿಂದ ಪರಿಶುದ್ಧ ಪ್ರಾಮಾಣಿಕ ಕಾಯಕವನ್ನು ಮಾಡುತ್ತಿದ್ದನು. ಆತನು ಬಸವಣ್ಣನವರನ್ನು ಹಾಡಿ ಹೋಗಳಿದ್ದಾನೆ.

ಬಾಚಿಕಾಯಕದ ಬಸವಣ್ಣ ೧೨ನೇ ಶತಮಾನದಲ್ಲಿದ್ದ ಶರಣ ಬಸವಣ್ಣನವರ ನೇರ ಪ್ರಭಾವಕ್ಕೆ ಒಳಗಾದವನು ಈತನ ಹೆಂಡತಿ ಕಾಳವ್ವೆ. ಇಬ್ಬರೂ ವಚನಗಳನ್ನು ರಚಿಸಿದ್ದಾರೆ. ಇವನ ೩೦ ವಚನಗಳು ದೊರಕಿವೆ. ಈತನ ವಚನಗಳ ಅಂಕಿತ "ಬಸವಪ್ರಿಯ ವಿಶ್ವಕರ್ಮ್ಮಟಕ್ಕೆ ಕಾಳಿಕಾ ವಿಮಲ ರಾಜೇಶ್ವರಲಿಂಗ" ಎಂಬುದು ಈತನ ಹೆಂಡತಿ ಶಿವಶರಣೆ ಕಾಳವ್ವೆ ವಚನದ ಅಂಕಿತ "ಕರ್ಮಹರ ಕಾಳೇಶ್ವರ" ಎಂದು ಕಾಳವ್ವೆ ಎರಡು ವಚನಗಳು ದೊರಕಿವೆ, ಕಾಯಕದ ಬಗ್ಗೆ ಖಚಿತ ನುಡಿಯನ್ನಾಡುತ್ತಾಳೆ.

ಬಾಚಿಕಾಯಕದ ಬಸವಣ್ಣ ದಂಪತಿಗಳು ಆದರ್ಶ ಜೀವನವನ್ನು ನಡೆಸಿದರು. ಇಬ್ಬರೂ ಕಾಯಕ ನಿರತರು, ಬಡಗಿ, ಕೆಲಸದಲ್ಲಿ ಸಹಾಯ ಮಾಡುತ್ತಿದ್ದವಳು, ಕಾಳವ್ವೆ ಅವರ ಕಾಯಕ ಪೂರ್ಣಫಲ ಪ್ರಧಾಯಕವಾಗಿತ್ತು. ಕಾಯಕದಿಂದ ಬಂದ ಸಂಪಾದನೆಯಿಂದ ದಾಸೋಹ ಸೇವೆಯನ್ನು ಮಾಡುತ್ತಿದ್ದರು.

ಕಾಯಕವು ಒಂದು ವ್ರತ ತಪ್ಪಿಸಬಾರದೆಂಬುದು ಇವರ ಸಂದೇಶವಾಗಿ ಅವರ ವಚನಗಳಲ್ಲಿ ಈ ದೇಹ ನಶ್ವರ ಶಿವಾನುಭವದಲ್ಲಿ ಸದ್ಗತಿಯನ್ನು ಕಾಣಬಹುದಾಗಿದೆ. ಎಂಬ ಸಂದೇಶವನ್ನು ಸಾರಿದ್ದಾರೆ. ಇಷ್ಟಲಿಂಗ ನಿಷ್ಠೆಯುಳ್ಳವರಾಗಿ ಷಟಸ್ಥಲ ಪಂಚಾಚಾರಗಳನ್ನು ಅರಿತವರಾಗಿ ತಮ್ಮ ಬಾಳನ್ನು ಸಾರ್ಥಕ ಪಡಿಸಿಕೊಂಡರು.

"ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ" ಎನ್ನುವಂತೆ ಸತಿಕ್ರಿಯಾಚರಣೆಯಿಂದ ಬಾಳ ಸಾಗಿಸಿದವರು. ಇವರ ವಚನಗಳು ಯಾವ ಜೀವಕ್ಕೂ ನೋವು ಉಂಟು ಮಾಡಬಾರದು ಎನ್ನುವ ಸಂದೇಶವನ್ನು ಸಾರುತ್ತವೆ. ಆದರಿಂದ ಬಾಚಿಕಾಯಕದ ಬಸವಣ್ಣ ದಂಪತಿಗಳು ನಮ್ಮ ಮುಂದೆ ಆದರ್ಶ ದಂಪತಿಗಳಾಗಿ ನಿಲ್ಲುತ್ತಾರೆ. ಬಾಚಿಕಾಯಕದ ಬಸವಣ್ಣ ಒಬ್ಬ ಶಿವಯೋಗಿಯಾಗಿ ಕಾಣುತ್ತಾನೆ. ಅವನ ವಚನಗಳನ್ನು ಈ ರೀತಿಯಾಗಿ ನೋಡಬಹುದು.

ಕುಂಭಿನಿಯ ಚಕ್ರದ ಮೇಲೆ ಪಿಂಡಬ್ರಹ್ಮಾಂಡವೆಂಬುದೊಂದು ಅಂಗ
ಆ ಅಂಗಾಲಯದೊಳಗೆ ಏಕಸಹಸ್ರವೆಂಬುದೊಂದು ದೇವಾಲಯ
ಆ ದೇವಾಲಯಕ್ಕೆ ವೆಜ್ಜವಿಲ್ಲದ ಬಾಗಿಲು
ಆ ಬಾಗಿಲ ಮೇಲುಪ್ಪರಿಗೆಯೊಳಗೊಂದು
ಮೂಲಧಾರ ಮುಕ್ತಿಯೆಂಬುದೊಂದು ಕೋಣೆ
ಅದಾರಿಗೊ ಮುಟ್ಟಬಾರದು ನೆನಯಬಾರದು
ನೋಡಲಾರದ ಕೋಣೆಯೊಳಗೆ ಮಾಣಿಕ್ಯದ ಮಹಾಪ್ರಕಾಶಕ್ಕ
ಮಿಗಿಲೆನಿಪ ನುಲೆಗಡೆಯಿಲ್ಲದ ಲಿಂಗ
ಮುಕ್ತಿಯೆಂಬ ಕೋಣೆಯ ಮೂಲಾಗ್ರದಲ್ಲಿ ಇಪ್ಪದೊಂದು (ಪರಂಜ್ಯೋತಿ)
ಆ ಮೂಲಾಗ್ರದ ಮೇಲಣ ಪರಂಜ್ಯೋತಿ ಪ್ರಕಾಶಪರಿಪೂರ್ಣ ಲಿಂಗವ
ತಿಳಿಯಬಲ್ಲದೆ ಮುಟ್ಟಲಾಗದು ಮೂರ ಕಟ್ಟಾಲಾಗದು ಆರ
ಈ ಕಷ್ಟವ ಕಳೆಯದನ್ನಕ್ಕ ಕಂಡೆಹೆನೆಂಬರವೇನೆಂಬೆ
ರುದ್ರ ತಪಸ್ಸಿನೊಳಗಾದ, ಬ್ರಹ್ಮ ನಿತ್ಯಕ್ಕೊಳಗಾದ
ವಿಷ್ಣು ಕಾಮದ ಬಲೆಯಲ್ಲಿ ಸಿಲ್ಕಿದ
ಇನ್ನು ದೇವಾದಾನವ ಮಾನವರೆಲ್ಲರೂ ಅನಂತಾನುಕೋಟಿ
ಭವಭವಪಾಶವೆಂಬ ರಾಟಾಳದ ಬಲೆಯಲ್ಲಿ ಉರುಳಾಡುತ್ತಿಪ್ಪರಯ್ಯ
ಇಂತು ಮೂಲದ ಕೀಲ ಸಂಹರಿಸಿ ನಿಂದ ನಿಸ್ಸೀಮ ಶರಣರೇ ಬಲ್ಲರಲ್ಲದೆ
ಮತ್ತಾರೂ ಅರಿಯರಯ್ಯ
ಬಸವಣ್ಣಪ್ರಿಯ ವಿಶ್ವಕರ್ಮಟಕ್ಕೆ ಕಾಳಿಕಾ ವಿಮಲ ರಾಜೇಶ್ವರ ಲಿಂಗವ"[೧]

ಈ ಮೇಲಿನ ವಚನ ಧೀರ್ಘವಾಗಿದ್ದರೂ ಇದರ ಒಳಾರ್ಥ ಬಹುಮಾರ್ಮಿಕವಾದದ್ದು, ಯೋಗಿಗಳ ನಿಲುವನ್ನು ಸಾದರ ಪಡಿಸುವಂತಹುದು, ನಮ್ಮ ಶರೀರದಲ್ಲಿ ಅರು ಚಕ್ರಗಳನ್ನು ಗುರುತಿಸಿ ಅವುಗಳನ್ನು ಉತ್ತೇಜಿಸುವ ಮೂಲಕ ಚೈತನ್ಯವನ್ನು ಪಡೆಯುತ್ತಾರೆ, ಕಂಬನಿ ಚಕ್ರದಲ್ಲಿ ಆ ಪಿಂಡಾಂಡದಲ್ಲಿ ಬ್ರಹ್ಮಾಂಡವಿದೆ. ಈ ಪಿಂಡಾಂಡವೆಂಬ ದೇವಾಲಯದಲ್ಲಿ ಮೂಲಾರ್ಧದಿಂದ ಮುಕ್ತಿ ಚಕ್ರದವರೆಗೂ ಆರು ಕೋಣೆಗಳಿವೆ.

ಈ ಕೋಣೆಯೊಳಗೆ ನೋಡಲಾಗದ ಮಾಣಿಕ್ಯ ಪ್ರಕಾಶವಿದೆ. ಆ ಮಹಾಪ್ರಕಾಶದಲ್ಲಿ ಪರಿಪೂರ್ಣಲಿಂಗವನ್ನು ಮುಟ್ಟುವುದು ಪ್ರಯಾಸದ ಕೆಲಸ ಇಂಥ ಆರು ಸ್ಥಳಗಳಲ್ಲಿ ಜ್ಯೋತಿಯ ಕಂಡೆವೆಂಬುದು ಕೆಲವರ ವಾದ. ಆದರೆ ಇದನ್ನು ಅರಿಯಲು ರುದ್ರ ತಪಸ್ಸಿಗೊಳಗಾದ.

ಬ್ರಹ್ಮ ಸತ್ಯಲೋಕವನ್ನು ಸೇರಿದ. ವಿಷ್ಣು ಕಾಮದ ಬಲೆಯಲ್ಲಿ ಸಿಲುಕಿದ ದೇವಾನು ದೇವತೆಗಳು ಇನ್ನು ಅನಂತಕೋಟಿ ಮಾನವರು ಭವಪಾಶದಲ್ಲಿ ಬಿದ್ದು ಹೊರಳಾಡುತ್ತಿರುವವರು. ಇದರ ಮೂಲಾರ್ಥವನ್ನು ಗೆಲ್ಲುವವರೇ ಶರಣರು ಮತ್ತಾರಿಗೂ ಸಾಧ್ಯವಿಲ್ಲ ಎನ್ನುತ್ತಾರೆ.

ಆಶೆಯರತ್ತ ಬಾಚಿಯಲ್ಲಿ ಭವಪಾಶವಿಲ್ಲದ ಜಂಗಮಕೆ ಕೆತ್ತ
ರೋಷವಿಲ್ಲ ಉಳಿಯಲ್ಲಿ ನಿಜವಾಸವ ನೋಡಿ ಹುಗಿಲುದೆಗೆವುತ್ತ
ಭಾಷೆಗೆ ಊಣಯವಿಲ್ಲದ ಸದ್ಭಕ್ತರ ಆಶ್ರಯಕ್ಕೆ ನಿಜವಾಸವ ಮಾಡುವ ಕಾಯಕ
ಈ ಗುಣ ಬಾಚಿಯ ಬಸವಣ್ಣ ನೇಮ
ಇದು ಸಂಗನ ಬಸವಣ್ಣ ಕೊಟ್ಟ ಕಾಯಕದಂಗೆ
ಬಸವಣ್ಣ ಪ್ರಿಯ ವಿಶ್ವಕರ್ಮಟಕ್ಕೆ
ಕಾಳಿಕಾ ವಿಮಲ ರಾಜೇಶ್ವರಲಿಂಗವನರಿವುದಕ್ಕೆ"[೨]

ಆಸೆಯನ್ನು ಬಿಟ್ಟು ಬಡಗಿ ಕಾಯಕದಿಂದ ಬಂದುದರಲ್ಲಿ ಜಂಗಮ ದಾಸೋಹ ಮಾಡಿ, ರೋಷವಿಲ್ಲದ ಉಳಿಯಿಂದ ನಿಜವಾದ ಮನೆಯನ್ನು ಮಾಡಿ ಎಲ್ಲರ ಭಾಷೆಯಂತೆ ಯಾರಿಗೂ ತೊಂದರೆಯಾಗದಂತೆ ಮನೆಯನ್ನು ಮಾಡುವ ಕಾಯಕ ನನ್ನದು. ಇದು ನನ್ನ ನೇಮ, ಇದು ಸಂಗನ ಬಸವಣ್ಣ ಕೊಟ್ಟ ಕಾಯಕ, ಬಸವಣ್ಣನ ಪ್ರೀತಿಗೆ ಮೀಸಲು ಎನ್ನುತ್ತಾನೆ.

"ಕುಲಗೋತ್ರ ಜಾತಿ ಸೂತಕದಿಂದ
ಕೆಟ್ಟವರೊಂದು ಕೋಟ್ಯಾನುಕೋಟಿ
ಜನನಸೂತಕದಿಂದ ಕೆಟ್ಟವರು ಅನಂತಕೋಟಿ
ಮಾತಿನ ಸೂತಕದಿಂದ ಮೋಸವಾದವರು
ಮನು ಮುನಿಸ್ತೋಮ ಅಗಣಿತಕೋಟಿ
ಆತ್ಮ ಸೂತಕದಿಂದ ಅಹಂಕರಿಸಿ ಕೆಟ್ಟವರು
ಹರಿಹರ ಬ್ರಹ್ಮಾದಿಗಳೆಲ್ಲರು.
ಯುದ್ಧೃಷ್ಟಂ ತನ್ನಷ್ಟಂ ಎಂಬುದನರಿಯದೆ
ಹದಿನಾಲ್ಕು ಲೋಕವೂ ಸಂಚಿತಾಗಾಮಿಯಾಗಿ
ಮರಳಿ ಮರಳಿ ಹುಟ್ಟುತ್ತಿಪ್ಪರಯ್ಯ
ಇಂತೀ ಸೂತಕದ ಪ್ರಪಂಚ ಬಿಡಲಾರದ ಪಾಷಂಡಿ ಮರುಳುಗಳಿಗೆ
ಪರಬ್ರಹ್ಮ ದೊರಕುವದೆ ಅಯ್ಯಾ?

ಇದು ಕಾರಣ, ನಾಮ ರೂಪುಕ್ರೀಗಳಿಗೆ ಸಿಲ್ಕುವನಲ್ಲವಯ್ಯ
ಅಗಮ್ಯ ಅಪ್ರಮಾಣ ಅಗೋಚರವಯ್ಯ
ಬಸವ ಪ್ರಿಯ ವಿಶ್ವಕರ್ಮಟಕ್ಕೆ ಕಾಳಿಕಾ ವಿಮಲ
ರಾಜೇಶ್ವರಲಿಂಗವಲ್ಲದೆ ಉಳಿದವರಿಗಿಲ್ಲವೆಂಬೆನು"೩

ಕುಲ, ಜಾತಿ, ಗೋತ್ರಗಳನ್ನು ಮಾಡಿಕೊಂಡು ಕೋಟಿ ಕೋಟಿ ಜನ ಕೆಟ್ಟರು ಹುಟ್ಟಿದ ದೋಷಗಳನ್ನೆಣಿಸಿ ಕೆಟ್ಟರು ಹಲವು ಕೋಟಿ ಜನರು ತಮ್ಮ ಮಾತಿನಂತೆ ನಡೆಯದೆ ಮೋಸದೊಳಗಾದವರು ಲೆಕ್ಕವಿಲ್ಲದಷ್ಟು ಮನುಷ್ಯರು ಮತ್ತು ಋಷಿಗಳು ಅಹಂಕಾರ ದೋಷದಿಂದ ಕೆಟ್ಟರು ಹರಿಹರ ಬ್ರಹ್ಮಾದಿ ತ್ರಿಮೂರ್ತಿಗಳು ನನ್ನಿಷ್ಟದಂತೆ ಯಾವುದೇ ಆಗುವುದಿಲ್ಲ ಎಂಬುದನ್ನು ತಿಳಿಯದೆ ಹದಿನಾಲ್ಕು ಲೋಕವು ಮತ್ತೆ ಮತ್ತೆ ಕರ್ಮಫಲಗಳಂತೆ ಹುಟ್ಟಿ ಬರುತ್ತಾರೆ ಈ ರೀತಿ ಇದ್ದರೂ ಈ ಪ್ರಪಂಚವನ್ನು ಬಿಡದೆ ಪಾಪಗಳಿಗೆ ಹುಚ್ಚರಿಗೆ ದೇವರು, ಸಿಗುವನೆ ಅವನನ್ನು ಹೆಸರಿನಿಂದಾಗಲಿ, ಕಾರ್ಯಗಳಿಂದಾಗಲಿ ಕಾಣಲಾಗದು ಆತನು ಯಾರಿಗೂ ನಿಲುಕದವನು ಕಾಣದವನು ಎಂದು ಲಿಂಗದ ವ್ಯಾಪ್ತಿಯನ್ನು ಬಸವಣ್ಣ ಹೇಳಿದಂತೆ ಹೇಳಿದ್ದಾನೆ.

"ಬಾಯಿ ಮುಚ್ಚಿ ಉಂಡಡೆ ಸಾವಧಾನಿಯೆಂಬೆ
ಕಣ್ಮು ಮುಚ್ಚಿ ನೋಡಿದಡೆ ಧ್ಯಾನ ಜ್ಞಾನಯೆಂಬೆ
ಅಂಗ ನಷ್ಟವಾಗಿ ಕೂಡಿದಡೆ ಲಿಂಗಾಂಗಿಯೆಂಬೆ
ಇಂತೀ ಭಾವಂಗಳಲ್ಲಿ ಭ್ರಮೆಯಿಲ್ಲದೆ.
ಆವ ಜೀವಂಗಳಲ್ಲಿ ನೋವತಾರದೆ
ಚಿಂತೆ ಸಂತೋಷವೆಂಬ ಅಂತುಕಕ್ಕೊಳಗಾಗದೆ
ಭ್ರಾಂತರ ಕೂಡಿ ಭ್ರಮೆಗೊಳಗಾಗದೆ
ಕ್ರಾಂತಿಯರ ಕಲೆಯ ಬಲೆಯ ಒಳಗಾಗಿ ವಿಶ್ರಾಂತಿಯ ನೀಗಾಡಿಕೊಳ್ಳದೆ
ಸರ್ವರಲ್ಲಿ ಶಾಂತನಾಗಿ ನಿಗರ್ವಿಯಾಗಿ
ಪರಬ್ರಹ್ಮ ಲೋಕ ಆನಂದ ಅವಿರತನಾಗಿಪ್ಪಾತನೆ
ಬಸವಣ್ಣ ಪ್ರಿಯ ವಿಶ್ವಕರ್ಮಟಕ್ಕೆ
ಕಾಳಿಕಾ ವಿಮಲ ರಾಜೇಶ್ವರಲಿಂಗವು ತಾನು ತಾನಾದ ಶರಣ"೪

ಬಾಯಿ ಮುಚ್ಚಿಕೊಂಡು ಊಟ ಮಾಡಿದರೆ ಸಮಧಾನಿ ಎನ್ನುತ್ತೇವೆ. ಕಣ್ಣು ಮುಚ್ಚಿಕೊಂಡು ಧ್ಯಾನ ಮಾಡಿದರೆ ಜ್ಞಾನಿ ಎನ್ನುತ್ತೇವೆ. ದೇಹ ಭಾವಗಳಲ್ಲಿ ಭ್ರಮೆ ಇಲ್ಲದಿದ್ದರೆ ಯಾವ ಪ್ರಾಣಿಗೂ ನೋವು ಇರುವುದಿಲ್ಲ ಚಿಂತೆ ಸಂಕಟಕ್ಕೆ ಒಳಗಾಗದೆ ಸ್ತ್ರೀಯ ಮೋಹಕ್ಕೊಳಗಾಗದ

ಶಾಂತಿ ನೆಮ್ಮದಿ ಕಳೆದುಕೊಳ್ಳದೆ. ಎಲ್ಲರಲ್ಲೂ ಶಾಂತಿ ಸಮಾಧಾನದಿಂದ ಇರುವವನೇ ಅಹಂಕಾರಿಯಾಗದೆ ಕಳಂಕರಹಿತನಾಗಿರುವನು.

"ಆಸೆಯ ಬಿಟ್ಟಡೆ ಭಕ್ತರೆಂಬೆ
ವೇಷವ ಬಿಟ್ಟಡೆ ಮಾಹೇಶ್ವರರೆಂಬೆ
ಭವಪಾಶವ ಬಿಟ್ಟಡೆ ಪ್ರಸಾದಿಯೆಂಬೆ
ಬಯಕೆ ನಿಂದಡೆ ಶರಣನೆಂಬೆ
ಅರಿವು ಶೂನ್ಯವಾದಡೆ ಐಕ್ಯನೆಂಬೆ
ಈ ಷಡುಸ್ಥಲದ ಮಹಾಸ್ಥಲದಲ್ಲಿ ಒಡಗೂಡಿ ನಿಂದುಗ
ಬಸವಣ್ಣ ಪ್ರಿಯ ವಿಶ್ವಕರ್ಮಟಕ್ಕೆ ಕಾಳಿಕಾ ವಿಮಲ
ರಾಜೇಶ್ವರಲಿಂಗಕ್ಕಲ್ಲದೆ ಇಲ್ಲವೆಂಬೆ"[೫]

ಆಸೆಯನ್ನು ತ್ಯಜಿಸಿದವನನ್ನು ಭಕ್ತ ಎನ್ನುತ್ತೇವೆ ದ್ವೇಷ ಅಸೂಯೆಗಳನ್ನು ಬಿಟ್ಟವನನ್ನು ಮಾಹೇಶ್ವರ ಎನ್ನುತ್ತೇವೆ. ಈ ಜಗದ ಜಂಜಾಟದಿಂದ ದೂರವಿದ್ದರೆ ಪ್ರಸಾದಿ ಎನ್ನುತ್ತೇವೆ. ಅನುಬಾವಿಯಾಗಿದ್ದಲ್ಲಿ ಪ್ರಾಣಲಿಂಗ ಎನ್ನುತ್ತೇವೆ. ಮನಸ್ಸಿನಲ್ಲಿ ಬಯಕೆ ಇಲ್ಲದಿದ್ದರೆ ಶರಣ ಎನ್ನುತ್ತೆನೆ ಜ್ಞಾನಿಯಾಗಿ ಬಯಲಿನಲ್ಲಿ ಬಯಲಾದರೆ ಐಕ್ಯ ಎನ್ನುತ್ತೇವೆ. ಈ ಆರು ಮೆಟ್ಟಿಲನ್ನು ಏರಿ ಮಹಾಸ್ಥಳದಲ್ಲಿ ನಿಂತವರೆ ಬಸವಣ್ಣನಿಗೆ ಪ್ರಿಯರಾದವರು ಎನ್ನುತ್ತಾರೆ.

"ರುಜೆ ರೋಗಂಗಳು ಲಿಂಗದೇಹಿಗಳೆಂಬವರ ಕೋಂಕಿದಲ್ಲಿ
ರೋಗದ ಇಚ್ಚೆಯನವರಿದು ನೆರಳಿನಲ್ಲಿ
ಲಿಂಗದ ಚಿತ್ತವೆತ್ತ ಹೋಯಿತ್ತು?
ಪಂಚಾಕ್ಷರಿ ಪ್ರಣವ ನಷ್ಟವಾಯಿತ್ತು
ಅರ್ಚನೆಯ ಪೂಜೆ ಕೆಟ್ಟಿತ್ತು, ಕೃತ್ಯದ ನೇಮ ಭ್ರಷ್ಟವಾಯಿತ್ತು.
ಇಂತಿವರ ಲಿಂಗದೇಹಿಗಳೆಂದಡೆ ಲಿಂಗಸಂಗಿಗಳೊಪ್ಪುವರೆ?
ಈ ಗುಣ ಸಂಗನ ಬಸವಣ್ಣಂಗೆ ದೂರ
ಬಸವಣ್ಣ ಪ್ರಿಯ ವಿಶ್ವಕರ್ಮಟಕ್ಕೆ
ಕಾಳಿಕಾವಿಮಲ ರಾಜೇಶ್ವರಲಿಂಗಕ್ಕ ದೂರ"[೬]

ಕಾಯಿಲೆ ಕಸಾಲೆಗಳು ಲಿಂಗವಂತರಿಗೆ ಬಂದರೆ ರೋಗದಿಂದ ನರಳುವರು ಇದರಿಂದಾಗಿ ಮನಸ್ಸು ಲಿಂಗ ಧ್ಯಾನ ಮಾಡುವುದಿಲ್ಲ. ಪಂಚಾಕ್ಷರಿ, ಮಂತ್ರ ಪಠನ ಮಾಡುವುದಿಲ್ಲ ಇದರಿಂದ ಪೂಜೆ ಕೆಡುತ್ತದೆ. ದೇಹದ ಸ್ಥಿತಿ ಹದಗೆಡುತ್ತದೆ. ಇಂಥವರು ಲಿಂಗದೇಹಿಗಳು ಎಂದರೆ

ಶರಣರು ಒಪ್ಪುವುದಿಲ್ಲ. ಈ ರೋಗ-ರುಜಿನಗಳು ಸಂಗನ ಬಸವಣ್ಣನಿಂದ ದೂರ ಅವುಗಳು ಅವರ ಹತ್ತಿರ ಸುಳಿಯಲಾರವು ಎನ್ನುತ್ತಾರೆ.

ವಿಕಾರಿ ವಿರಕ್ತನಲ್ಲ
ಪ್ರಕೃತಿಜೀವಿ ಅರ್ತಿಕಾರ ಕ್ಷಣಿಕ ಪರಿಹಾಸಕ ಭಕ್ತನಲ್ಲ
ಕುಚಿತ್ತ ಕುಹಕ ದುರ್ವಿದಗ್ಧ ಪಿಸುಣ
ಘಾತುಕ ಅಪ್ರಮಾಣ ಗುರು ಮೂರ್ತಿಯಲ್ಲ
ಈ ತ್ರಿವಿಧಧರ್ಮ ಇದಿರಾತ್ಮನನರಿಯದೆ
ಬೇಡಿ ಕಾಡಿಯುಂಬುವ ಚರಮೂರ್ತಿಯಲ್ಲ
ಸತ್ಯರುಗಳ ಇಚ್ಛೆಯನರಿದು
ಅಚ್ಚೊತ್ತಿದಂತಿರದಿರ್ದಡೆ ಕರ್ತೃಸ್ವರೂಪಕ ಸಲ್ಲ
ಇಂತಿವರಲ್ಲಿ ಅವಗುಣವ ಕಂಡು ಭಕ್ತಂಗೆ ಬಿಡಬಾರದು
ಬಾಯೊಳಗಣ ಬಳಗದಂತೆ ವಿರಕ್ತಂಗೂ ಗುರುಚರಕ್ಕೂ
ಪರಶಿವ ಮೂರ್ತಿಗೂ ಸದ್ಭಕ್ತನೆ ಘನ
ಅಷ್ಟಾಷಷ್ಟಿಕೋಟಿ ತೀರ್ಥಂಗಳು, ದಿವ್ಯದೇವಸ್ಥಾನಂಗಳು
ಸಕಲವೇದಸಾಸ್ತ್ರ ಪುರಾಣ ಆಗಮಂಗಳು
ಭಕ್ತನ ಬಾಗಿಲ ನೀರಿಂಗೆ ಸಿರಿಯಲ್ಲವೆಂದು
ಬಸವಣ್ಣ ಪ್ರಿಯ ವಿಶ್ವಕರ್ಮಟಕ್ಕೆ ಕಾಳಿಕಾವಿಮಲ ರಾಜೇಶ್ವರಲಿಂಗವು
ಭಕ್ತರ ಕಟ್ಟುಗೊತ್ತಿನಲ್ಲಿರಬೇಕು"[೭]

ಚಂಚಲ ಮನಸ್ಸಿನವನು ವಿರಕ್ತನಾಗಲಾರ, ನಿಸರ್ಗ ಜೀವಿಗಳನ್ನು ಹೀನಾಯವಾಗಿ ಕಾಣುವವನು ಭಕ್ತನಲ್ಲ ದುರಾಚಾರಿ, ಕುಯುಕ್ತಿ, ಜೀಪುಣ, ದುರ್ವಿಚಾರಿ ಅಪಾಯಕಾರಿಯಾದವನು ಪ್ರಮಾಣಿನಲ್ಲದವನು ಗುರುವಾಗುವುದಿಲ್ಲ ಮೂರು ಧರ್ಮಗಲಾದ ಅರ್ಥ, ಕಾಮ, ಮೋಕ್ಷಗಳ ಅರ್ಥವನ್ನು ತಿಳಿಯದವನು ಕಾಡಿ ಬೇಡಿ ಉಣ್ಣುವನು ಚರಮೂರ್ತಿಯಾಗುವುದಿಲ್ಲ ಸತ್ಯ ಶರಣರ ನಿಜಗುಣಗಳನ್ನು ಅರಿಯದವನು ಧೈವ ಸ್ವರೂಪನಲ್ಲದವನು. ಕೆಟ್ಟ ಗುಣಗಳಿಂದ ಕೂಡಿದವನು, ವಿರಕ್ತನಾಗಿರಲಿ, ಗುರುವಾಗಿರಲಿ ಪರಶಿವ ಮೂರ್ತಿಯಾಗಿರಲಿ ಭಕ್ತರು ಅಂಥವರಿಗೆ ಬೆಲೆ ಕೂಡಬಾರದು, ನಿಜವಾದ ಭಕ್ತನ ಅಂಗಳದ ನೀರಿಗೆ ಎಂಟು ಕೋಟಿ ತೀರ್ಥಕ್ಷೇತ್ರಗಳು ಸಮಭಾರವು ವೇದಶಾಸ್ತ್ರಪುರಾಣ ಆಗಮಗಳು ನಿಜಭಕ್ತನಿಗೆ ಸಮನಲ್ಲ ಎಂದು ಹೇಳುತ್ತಾನೆ.

"ಆರು ದರ್ಶನವೆಲ್ಲ ಎನ್ನ ಬಾಚಿಯ ಕಲೆ
ಮಿಕ್ಕಾದ ಮೀರಿದ ಅವಧೂತರುಗಳೆಲ್ಲ
ಎನ್ನ ಉಳಿಯೊಳಗಣ ಒಡಪು
ಇಂತಿವ ಮೀರಿ ಭೇದಿಸಿ ಬೇಧಿಸಿಹೆನೆಂಬವರೆಲ್ಲ
ಎನ್ನಕೊಡತಿಯಲ್ಲಿ ಬಡೆಯಿಸಿಕೊಂಬ ಬಡಿಹೋರಿಗಳು
ಇಂತೀ ವಿಶ್ವಗೋಧರೆಲ್ಲರೂ
ಕರ್ತಾರ ಕರ್ಮಟದ ನಕ್ಕು ಬಚ್ಚನೆಯ ಚಿಕ್ಕ ಮಕ್ಕಳು
ಇಂತಿವನರಿದು ಕಾಮದಲ್ಲಿ ಕರಗದೆ
ಕ್ರೋಧದ ದಳ್ಳುರಿಯಲ್ಲಿ ಬೇಯದೆ
ನಾನಾ ವ್ಯಾಮೋಹ ಋತುಕಾಲಂಗಳ ಕಾಹಿನ ಬಲೆಗೊಳಗಾಗುತ್ತ
ಮತ್ತೆ ಸಾವಧಾನವೆ. ಮತ್ತೆಯೂ ಜ್ಞಾನಾತೀತವೆ
ಮತ್ತ ಗುರು ಚರ ಪರವೆ, ಒಕ್ಕುಡಿತೆ ನೀರಿನಲ್ಲಿ ತಾಸತ್ತ ಮತ್ತೆ
ಸಮುದ್ರ ವೇಷ್ಟಾಳವಾದಡೇನು?
ಕಿಂಚಿತ್ತು ಸುಖದಲ್ಲಿ ಲಿಂಗವ ಬಿಟ್ಟು 
ಅಂಗನೆಯರುರಸ್ಥಲದಲ್ಲಿ ಅಂಗೀಕರಿಸಿ
ಅವರಧರ ಪಾನಂಗಳ ಮಾಡಿ ನಾ ಲಿಂಗಾಂಗಿಯಂದಡೆ
ಸರ್ವಸಂಗ ಪರಿತ್ಯಾಗವ ಮಾಡಿದ ಲಿಂಗಾಂಗಿಗಳೊಪ್ಪರು
ಬಸವಣ್ಣಪ್ರಿಯ ವಿಶ್ವಕರ್ಮಟಕ್ಕೆ ಕಾಳಿಕಾವಿಮಲ
ರಾಜೇಶ್ವರಲಿಂಗವು
ಸ್ವಪ್ನದಲ್ಲಿ ಕುರುಹುಗಾಣಿಸಿಕೊಳ್ಳ"[೮]

ಬಸವಯ್ಯನ ತನ್ನ ವೃತ್ತಿ ನಿರತ ಕಲೆಯಾದ ಬಾಚಿಯ ಕಲೆಯ ಮೂಲಕ ತನ್ನ ಕಸುಬಿನ ಕಲೆಯನ್ನು ಕ್ರಿಯೆ ಮತ್ತು ಜ್ಞಾನ ಅರಿವಿನಡೆ ತೋರಿಸುವುದು ಕಂಡುಬರುತ್ತದೆ.

ಆರುದರ್ಶನಗಳನ್ನು-ಅವಧೂತರನ್ನು ತನ್ನ ಕಲೆಯಾದ ಬಾಚಿಯೊಳಗೆ ರೂಪಕವಾಗಿ ಬಂದರೂ ಕೂಡ ನುಡಿದಂತೆ ನಡೆಯದೆ ಜನರನ್ನು ಗುರುತಿಸುವ ಕ್ರಮವನ್ನು ಇಲ್ಲಿ ಗುರುತಿಸುವುದು. ಅಲ್ಪಸುಖಕ್ಕಾಗಿ ಲಿಂಗವನ್ನು ಬಿಟ್ಟು ಮಧ್ಯಪಾನ ಮಾಡಿ ಕಾಮ, ಕ್ರೋಧ, ಷಡುದರುಶನಗಳನ್ನು ಅನುಸರಿಸದೆ ನಾಲಿಂಗಿ ಎಂದು ವಚನಭ್ರಷ್ಟರನ್ನು ಮೂದಲಿಸಿರುವುದು ಈ ವಚನದ ಮಹತ್ವವಾಗಿದೆ.

"ಮಾತೆಯ ಆತ್ಮದಲ್ಲಿ ರೇತ ರಕ್ತವು ಕೂಡಿ
ಕೆನ್ನೀರ ಮುತ್ತಿನಂತಾಯಿತಯ್ಯ
ಆ ಕೆನ್ನೀರ ಮುತ್ತು ವಿದ್ರುಮದಾಕಾರವಾಯಿತ್ತಯ್ಯ
ಆ ವಿದ್ರುಮದಾಕಾರ ಒಂದು ಹಿಡಿಯಾಯಿತ್ತಯ್ಯ
ಆ ಹಿಡಿಯಾದುದಕ್ಕೆ ಆಕಾರ ಅಂದವಾಗಿ ಓಂಕಾರ ಸ್ವರೂಪವಾಯಿತ್ತಯ್ಯ
ಆ ಓಂಕಾರ ಸ್ವರೂಪವಾದ ಪಿಂಡಕ್ಕೆ ನವಮಾಸ ತುಂಬಿ
ತೆರಪಾದ ಬಾಗಿಲಲ್ಲಿ ಬಂದ ಆತ್ಮನ ಅಂಗವೆ ಅನುವಾಗಿ ಆಯಿತದಾಯಿತ್ತು
ಆ ಆಯತವಾದ ಆತ್ಮನು ತನ್ನ ಅಂಗದೊಳ ಹೊರಗೆ ನೋಡುತ್ತಿರಲು
ಅಂಗವೆ ಪಾಣಿಪಟ್ಟವಾಯಿತ್ತು. ಲಿಂಗವೆ ಶಿರಸ್ಸು ಆಯಿತ್ತು
ಆ ಶಿರಸ್ಸಿನೊಳಗೆ ಎರಡು ಜ್ಯೋತಿಯುಂಟು
ಆ ಎರಡು ಜ್ಯೋತಿಯ ನಡುಮಧ್ಯ ಸ್ಥಾನದಲ್ಲಿ
ಒಂದು ಅಮೃತದ ಕಮಲವುಂಟು
ಆ ಕಮಲದೊಳಗಣ ಅಮೃತವನುಣಬಲ್ಲಡೆ
ಆತನ ಪಿಂಡಾಂಡ ಜ್ಞಾನಿಯಂದಾತ
ನಮ್ಮ ಬಸವಪ್ರಿಯ ವಿಶ್ವಕರ್ಮಟಕ್ಕೆ ಕಾಳಿಕಾ ವಿಮಲ
ರಾಜೇಶ್ವರಲಿಂಗವೆಂಬೆ"

ಈ ವಚನದಲ್ಲಿ ಸೂಚಿತವಾದ ಕಿನ್ನೀರ ಮುತ್ತು ಪ್ರತಿಮೆಯ ಪಿಂಡಾಡದ ಅಗಾದತೆಯನ್ನು ಮತ್ತು ಮಾತೆಯ ಆತ್ಮದಲ್ಲಿ ರಕ್ತವು ಕೂಡಿರುವುದರಿಂದ ನವರತ್ನದ ಒಂದು ಹಿಡಿಯನ್ನು ಹಿಡಿಯುವುದಕ್ಕೆ ಆಕಾರವು ಅಂದವಾಗಿ ಇರಬೇಕು, ಓಂಕಾರ ಸ್ವರೂಪಿಯಾಗಿ ಪಿಂಡಕ್ಕೆ ನವಮಾಸಗಳು ತುಂಬಿ ಸಮಯ ಸಂದರ್ಭದಲ್ಲಿ ಒಂದ ಆತ್ಮದ ಅಂಗದೊಳಗೆ ಆ ಎರಡು ಜ್ಯೋತಿಯ ನಡುಮಧ್ಯೆ ಸ್ಥಾನದಲ್ಲಿ ಒಂದು ಅಮೃತದ ಕಮಲದೊಳಗೆ ಅಮೃತವನ್ನು ಉಣ್ಣುವುದಲ್ಲದೆ ಆತನು ಕೂಡ ಜ್ಞಾನಿಯಾಗಬಹುದು ಎಂದು ಈ ವಚನದಲ್ಲಿ ಹೇಳಬಹುದು.

ಘಟಸ್ಥಾವರದೊಳಗನೊಡೆಗು ಕಿಚ್ಚಿನ ಹೊರೆಯ ಕಂಡ
ಕಾಣಿಸಿ ಮಿಕ್ಕಾದ ಹೊರಗಣ ಹೊರೆಯ ತಿಗುಡಂ ಕೆತ್ತಿ
ಕಂಬವ ಶುದ್ಧೈನೆ ನೆಲವಟ್ಟಕ್ಕೆ ಚದುರಸನಿಂಬುಗೊಳಿಸಿ
ಮೇಲಣವಟ್ಟಕ್ಕೆ ವರ್ತುಳಾಕಾರದಿದ ಶುದ್ಧವ ಮಾಡಿ
ಏಕೋತ್ತರ ಶತಸ್ಥಲವನೇಕೇಕರಿಸಿ

ಒಂದು ದ್ವಾರದ ಬೋದಿಗೆಯಲ್ಲಿ ಕಂಬದ ಶುದ್ಧೈಸಿ
ಕಂಬ ಎರವಿಲ್ಲದ ನಿಂದ ಮತ್ತೆ ಚದುರಸಬೇದ
ಅಷ್ಟದಿಕ್ಕಿನ ಬಟ್ಟೆಕೆಟ್ಟು ನವರಸ ಬಾಗಿಲು ಮುಚ್ಚಿ
ತ್ರಿಕೋಣೆಯನುಲುಹುಗೆಟ್ಟು ಮುಂದಣ ಬಾಗಿಲ ಮುಚ್ಚಿ
ಹಿಂದಣ ಬಾಗಿಲು ಕೆಟ್ಟು, ನಿಜವೊಂದೆ ಬಾಗಿಲಾಯಿತ್ತು
ಈ ಕೆಲಸದ ಆ ಕಂಬದ ನಡುವೆ ನಿಂದು ನೋಡಲಾಗಿ
ಮಂಗಳ ಮಯವಾಗಿ, ಇದು ಯೋಗಸ್ಥಲವಲ್ಲ
ಇದು ಘನಲಿಂಗ ಯೋಗಸ್ಥಲ ಇಂತೀ ಬೇದವ ತಿಳಿದಡೆ
ಬಸವಣ್ಣ ಪ್ರೀಯ ವಿಶ್ವಕರ್ಮಟಕ್ಕೆ
ಕಾಳಿಕಾ ವಿಮಲ ರಾಜೇಶ್ವರಲಿಂಗವಲ್ಲದಿಲ್ಲಾ ಎಂದೆ”[೧೦]

ಈ ವಚನ ಮಣ್ಣಿನ ಪಾತ್ರೆಯನ್ನು ಬೆಂಕಿಯಲ್ಲಿ ಇಟ್ಟು ಅದನ್ನು ಕಾಯಿಸಿ ಅದರ ಹೊರಗಡೆ ಇರುವ ಸಿಪ್ಪೆಯನ್ನು ತೆಗೆದು ಕಂಬವನ್ನು ಶುದ್ಧ ಮಾಡುವುದರ ಮೂಲಕವಾಗಿ ಅದರಲ್ಲೂ ಬರುವಂತಹ ಲಾಭವನ್ನು ಎಂಟು ಕತ್ತಿಯ ಅಂಗುಲವನ್ನು ಮತ್ತು ತುದಿಯನ್ನು ಅದನ್ನು ಸಮಾನಕರವಾಗಿ ಶುದ್ಧ ಮಾಡಿ ಏಕೋತ್ತರವಾದ ಶತಸ್ಥಲದಲ್ಲಿರಿಸಿ ಅದರ ಒಂದು ದ್ವಾರದ ಬೋದಿಗೆಯನ್ನು ಅಥವಾ ಕಂಬವನ್ನು ಶುದ್ಧಮಾಡಿ ಎಂಟು ದಿಕ್ಕಿಗೆ ಬಟ್ಟೆಯನ್ನು ಕಟ್ಟಿ ಒಂಭತ್ತು ಬಾಗಿಲನ್ನು ಮುಚ್ಚಿ ಅದರಲ್ಲಿರುವ ಹಿಂದಿನ ಬಾಗಿಲನ್ನು ಕಟ್ಟಿ ನಿಜವಾದ ಬಾಗಿಲಾಯಿತೇ ಎಂದು ಹೇಳುವುದರ ಮೂಲಕವಾಗಿ ಕಂಬದ ನಡುವೆ ನಿಂತು ಅದು ಮಂಗಳಮಯವಾಗಿರುವುದನ್ನು ಮತ್ತೆ ಇಷ್ಟಲಿಂಗದಲ್ಲಿ ಅನುರಕ್ತರಾಗಿರುವನ್ನು ತಮ್ಮ ದೈಹಿಕ ಅಂಗಗಳ ಮೂಲಕ ವಿವರಿಸುವುದು ಇಲ್ಲಿ ಗುರುತಿಸಬಹುದು.

“ನಿಜಾನಂದ ನಿರ್ಭಿನ್ನವೆಂಬುವ ನಿತ್ಯನಾತನ ಪಿಂಡದೊಳಗೆ
ನಿಶ್ಚಿಂತಾಮೃತವೆಂಬ ದಿವ್ಯಾಮೃತ ಕುಂಭವುಂಟು
ನಾಭಿ ಸ್ಥಾನದೊಳಗೆ ಇದ್ದಂಥಾ ಮಹಾಕುಂಭದೊಳಗೆ
ಮಹಾನುಭಾವವೆಂಬುದೊಂದು ಸುವರ್ಣ ಮಂಟಪವುಂಟು
ಆ ಸುವರ್ಣ ಮಂಟಪದೊಳಗೆ ರತ್ನಸಿಂಹಾಸನವೆಂಬ ಮಹಾಪೀಠಕೆಯುಂಟು
ಆ ಪೀಠಿಕೆಯ ಮೇಲೆ ಸಾಸಿರ ಅನಂತಕೋಟಿ ಪ್ರಭೆಯೊಳಗಣ
ಕಳಾ ಸ್ವರೂಪವಪ್ಪುದೊಂದು ಪ್ರಾಣಲಿಂಗ
ಆ ರತ್ನ ಪೀಠಿಕೆಯ ಮೇಲೆ ಪ್ರಕಾಶಿಸುತ್ತಿರ್ಪ ಲಿಂಗ

ಆ ಲಿಂಗವೇ ತನ್ನ ಸ್ವಯಂನಂದದಿಂದ
ಊರ್ಧ್ವವೆಂಬ ಚಕ್ರಸ್ಥಾನದೊಳಗೆ ನಿಂದು ನೋಡುತ್ತಿರಲು
ಒಂದು ಕಮಲ ವಿಕಸಿತವಾಯಿತು.
ಆ ಕಮಲದೊಳಗೊಂದು ದಿವ್ಯಜ್ಞಾನವೆಂಬುದೊಂದು ಲಿಂಗ
ತನ್ನಲ್ಲಿ ತೊಲಗಿ ಬೆಳಗಿ ಪ್ರಕಾಶಿಸಿತ್ತು
ನೋಡುತಿರಲು ತಾನೆ ಪರಂಜ್ಯೋತಿ ದಿವ್ಯವಸ್ತು ಎಂದೆ ಕಾಣಾ
ಬಸವಪ್ರಿಯ ವಿಶ್ವಕರ್ಮಟಕ್ಕೆ ಕಾಳಿಕಾ ವಿಮಲ
ರಾಜೇಶ್ವರಲಿಂಗದರಿಕೆಯಾಗಿ"[೧೧]

ಬಸವಯ್ಯನ ಈ ವಚನ ಆಧ್ಯಾತ್ಮಿಕ ಮಾರ್ಗದಲ್ಲಿ ಶರೀರ ತತ್ವ ಪ್ರತಿಪಾದನೆಯೇ ಪ್ರಮುಖ ಆಶಯವಾಗಿದೆ. ಶರೀರ ತತ್ವದ ಮೂಲಕ ಇಷ್ಟಲಿಂಗದ ಸ್ವರೂಪವನ್ನು ತನ್ನ ದೇಹ ಪೀಠದ ಮೂಲಕ ಊರ್ಧ್ವಚಕ್ರ ಸ್ಥಾನದ ಮೂಲಕ ಒಂದು ಕಮಲ ವಿಕಸಿತವಾಗುವ ಪರಿಯನ್ನು ವಿಕಸಿನಶೀಲ ಮಾದರಿಯೊಂದನ್ನು ತಾನೇ ಸರ್ವಸ್ವವನ್ನಾಗಿಸಿಕೊಂಡಂತೆ ದೇಹವನ್ನು ದೇವಾಲಯವನ್ನಾಗಿಸಿಕೊಂಡಿರುವುದನ್ನು ಈ ವಚನ ವಿವರಿಸುತ್ತದೆ. ಅಂದರೆ ಇಷ್ಟಲಿಂಗದಲ್ಲಿ ಅನುರುಕ್ತರಾಗಿರುವನ್ನು ತಮ್ಮ ದೈಹಿಕ ಅಂಗಗಳ ಮೂಲಕ ವಿವರಿಸುವುದು ಇಲ್ಲಿ ಗುರುತಿಸಬಹುದು.

ಮೂರಂಗುಲದಲ್ಲಿ ಅಳೆದು
ಐದಂಗುಲದಲ್ಲಿ ಪ್ರಮಾಮಿಸಿ
ಆರಂಗುಲದಲ್ಲಿ ವಟ್ಟಕ್ಕೆ ಶುದ್ಧವಾಯಿತು.
ಎಂಟರಳತೆ, ಹದಿನಾರರ ಚದುರಸ
ಮೂವತ್ತೆರಡರ ಮಧ್ಯದಲ್ಲಿ ಹಸ್ತ ಕಂಭಿಯನ್ನಿಕ್ಕಿ
ಮೂರರಲ್ಲಿ ಭಾಗಿಸಲಾಗಿ, ಎರಡು ಒಳಗು ನಿಂದಿತ್ತು
ಒಂದು ಹೊರಗಾದ ಕೈಸಾಲೆಯಾಯಿತ್ತು
ಈ ಕೆಲಸವೇ ಹೊರಗೆ ಬಾಚಿಯಲ್ಲಿ ಸವೆದ
ಒಳಗೆ ಉಳಿಯಲ್ಲಿ ಸವೆದ
ಇಂತೀ ತೆರನ ತಿಳಿದಡೆ
ಬಸವಣ್ಣ ಪ್ರಿಯ ವಿಶ್ವಕರ್ಮಟಕ್ಕೆ
ಕಾಳಿಕಾ ವಿಮಲ ರಾಜೇಶ್ವರಲಿಂಗವಲ್ಲದಿಲ್ಲಾ ಎಂದ"[೧೨]

ಈ ಮೇಲಿನ ವಚನದಲ್ಲಿ ಅಂಗುಳದ ಜೊತೆಗೆ ಹೆಚ್ಚಿನ ಅಳತೆಗಳಾದ ಹಸ್ತ ಎಂಟರಳತೆ ಎನ್ನುವ ಮಾಪನ ಪರಿಭಾಷೆಗಳು ಕಾಣಿಸಿಕೊಂಡಿವೆ. ರೂಢಿಯಲ್ಲಿ ಹಸ್ತ ಎನ್ನುವುದನ್ನು ಒಳ ಎಂದು ಕರೆಯುತ್ತಾರೆ. ಇದರಲ್ಲಿ ಇಪ್ಪತ್ತು ನಾಲ್ಕು ಅಂಗುಳಗಳಿರುತ್ತವೆ. ಮೊಳ ಪ್ರತಿನಿತ್ಯ ಉಪಯೋಗವಾಗುವ ಮಾಪನ, ಇಂಥ ನಾಲ್ಕು ಮೊಳಗಳ ಒಂದು ಅಳತೆಯನ್ನೇ ಕೋಲು ಅಥವಾ ದಂಡ ಎಂದು ಕರೆಯಲಾಗುತ್ತದೆ. ಇದನ್ನು ಮೂರು ಎಂದು ಬೇಕಾದರೂ ಗುರುತಿಸಿಕೊಳ್ಳುವುದು. ಮೇಲಿನ ವಚನವು ಎಂಟು, ಹದಿನಾರು ಮತ್ತು ಮೂವತ್ತೆರಡರ ಗುಣಿತದಲ್ಲಿ ಮುಂದುವರೆಯುತ್ತದೆ. ಇದನ್ನು ವಾಸ್ತುಶಾಸ್ತ್ರದಲ್ಲಿ ಆಯ-ವ್ಯಯ ಎಂದು ಕರೆಯಲಾಗುತ್ತದೆ.

"ಅಪ್ಪು ಬಲಿದು ಪೃಥ್ವಿಯ ಮೇಲೆ
ಶತಕೋಟಿ ಸಹಸ್ರಕೋಟಿ ಬಯಲಿಂದತ್ತ ಭರಿತವಪ್ಪುದೊಂದು ರಥ
ಆ ರಥಕ್ಕೆ, ಬ್ರಹ್ಮ. ವಿಷ್ಣು, ಸೂರ್ಯ, ಚಂದ್ರ
ವೇದಶಾಸ್ತ್ರ ಪುರಾಣ ಸಕಲಾಗಮ ಪ್ರಮಾಣಗೊಂಡಿದ ಷಟ್ಕಲೆ
ಮೇರು ಮಂದಿರವೆಂಬ ಅಚ್ಚುಗಂಬವ ನೆಟ್ಟಿದೆ
ಆ ರಥದ ಸುತ್ತಲು ದೇವಾದಿದೇವರ್ಕಳೆಲ್ಲರ ತಂದು ಸಾರಥಿಯನ್ನಿಕ್ಕಿ
ಆ ರಥದ ನಡುಮಧ್ಯೆ ಸ್ಥಾನದಲ್ಲಿ ಅಷ್ಟದಳ ಕಮಲವಾಯಾಗಿ
ಅನಂತ ಸಹಸ್ರಕೋಟಿ ಕಮಲ ಪದ್ಮಾಸನವ ರಚಿಸಿದೆ
ಈ ಪದ್ಮಾಸನದ ಮೇಲೆ ಶಂಭು ಸದಾಶಿವನೆಂಬ
ಮಹಾದೇವನ ತಂದು ನೆಲೆಗೊಳಿಸಿದೆ
ಆ ರಥದ ಪೂರ್ವಬಾಗಿಲಲ್ಲಿ ಆದಿಶಕ್ತಿಯ ನಿಲಿಸಿದೆ
ಉತ್ತರ ಬಾಗಿಲಲ್ಲಿ ಓಂ ಪ್ರಮಾಣ ಸ್ವರಬಪಿಣಿಯೆಂಬ ಶಕ್ತಿಯ ನಿಲಿಸಿದೆ
ಆ ಪಶ್ಚಿಮ ಬಾಗಿಲಿನಲ್ಲಿ ಕ್ರಿಯಾಶಕ್ತಿಯ ನಿಲಿಸಿದೆ
ದಕ್ಷಿಣ ಬಾಗಿಲಲ್ಲಿ ಚಿಚ್ಚಕ್ತಿಯ ನಿಲಿಸಿವೆ
ಬೈರವ, ವಿಘೇಶ್ವರ, ಷಣ್ಮುಖ, ವೀರಭದ್ರರೆಂಬ ನಾಲ್ಕು ಧ್ವಜಪಟಗಳನ್ನೆತ್ತಿ
ಆ ರಥದ ಅಷ್ಟದಿಕ್ಕುಗಳಲ್ಲಿ ನಾನಾ ಚಿತ್ರ ವಿಚಿತ್ರ ವೈಭವಂಗಳೆಂಬ ಕೆಲಸವ ತುಂಬಿ
ಅದರ ಗಾಲಿಯ ಕೀಲುಗಳಲ್ಲಿ
ಈರೇಳು ಭುವನವೆಂಬ ಹದಿನಾಲ್ಕು ಲೋಕಂಗಳ ಧರಿಸಿ ಆಡುತ್ತಿರ್ಪವು

ಅನಾದಿಶೂನ್ಯವೆಂಬ ಮಹಾರಥದೊಳಗಿಪ್ಪ
ನಮ್ಮ ಬಸವಣ್ಣ ಪ್ರಿಯ ವಿಶ್ವಕರ್ಮಟಕ್ಕೆ ಕಾಳಿಕಾ ವಿಮಲ
ರಾಜೇಶ್ವರ ಲಿಂಗವು ನಿರಾಳ ನಿಶ್ಚಿತಂ ನಿರ್ಲೇಪನು"[೧೩]

ಈ ವಚನದಲ್ಲಿ ಕಾಣುವ ಬ್ರಹ್ಮ, ವಿಷ್ಣು, ಸೂರ್ಯ ಇವೆರೆಲ್ಲ ವಿಶ್ವಕರ್ಮನಲ್ಲಿ ನಿಹಿತರಾದವರು. ಪಂಚಶಕ್ತಿಗಳ ಸೃಷ್ಠಿ ಮತ್ತು ವಿಕಸನ ಹಾಗೂ ಪಾಲನೆಗೆ ಅಧಿಕಾರಸ್ಥ ಎಂಬುದು ವಿಶ್ವಕರ್ಮ ಧರ್ಮದ ಸಿದ್ಧಾಂತ ಈತ ದೇವಾದಿ ದೇವತೆಗಳ ಸಹಾಯದಿಂದ ಈ ಸೃಷ್ಠಿಯನ್ನು ಸಲಹುತ್ತಾನೆ ಈತನಲ್ಲಿ ನಿಹಿತರಾದ ಪಂಚಬ್ರಹ್ಮರಿಗೆ ಆಧಿಶಕ್ತಿ, ಪರಾಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಸಕ್ತಿ ಎಂಬ ಪಂಚಶಕ್ತಿಗಳಿರುತ್ತವೆ.

ಬಾಚಿಕಾಯಕದ ಬಸವಯ್ಯನ ವಚನದಲ್ಲಿ ದೇಹ ಮೀಮಾಂಸೆಯ ಒಂದೊಂದು ಅಂಗದ ಕ್ರಿಯಾರೂಪಗಳಾಗಿ ಕಾವಲು ದೇವತೆಗಳಾಗಿ ನಿಯಕ್ತರಾಗಿದ್ದಾರೆ. ಈ ಕಾವಲು ನಿಲಿಸುವ ಕ್ರಮವೇ ಜಾಗೃತಾವ್ಯವಸ್ಥೆಯ ಕ್ರಿಯಾತ್ಮಕ ಪ್ರವೃತ್ತಿಯ ಪ್ರತೀಕವಾಗಿದೆ. ಇಲ್ಲಿ ಬಹು ಮುಖ್ಯವಾದಂತಹ ರಥದ ನಡುಮಧ್ಯ ಸ್ಥಾನದಲ್ಲಿ ಅಷ್ಟದಳಕಮಲ ಕಮಲಪದ್ಮಾಸನ ಚಕ್ರಸ್ಥಾನ ಮಹಾಹೃತ್ಯ ಮಲದೊಳಗೆ ಉನ್ಮನೀಯ ಸ್ಥಾನ ಕಮಲಪೀಠದ ಶಂಭು ಸದಾಶಿವನಾದ ಮಹಾದೇವನ ನೆಲೆಗೊಳಿಸುವಿಕೆ ಇಂಥ ತಾಂತ್ರಿಕ ಪರಿಭಾಷೆ ಮತ್ತು ಪರಿಕಲ್ಪನೆಗಳು ಬಸವಯ್ಯನನ್ನು ವಿಶಿಷ್ಟವಾಗಿ ಅಭ್ಯಾಸ ಮಾಡಲು ಪ್ರಚೋಧಿಸುತ್ತದೆ.

ಈ ರೀತಿಯಾಗಿ ಬಾಚಿಕಾಯಕದ ಬಸವಯ್ಯ ಶರಣ ಧರ್ಮದ ವಿಚಾರವಾಗಿ ತನ್ನ ವಚನಗಳಲ್ಲಿ ಅನೇಕ ವಿಷಯಗಳನ್ನು ತಿಳಿಸುತ್ತಾ ಅನುಭಾವಿಯಾಗಿ ಶರಣ ಪಂಕ್ತಿಯಲ್ಲಿ ಅಗ್ರಗಣ್ಯನಾಗಿದ್ದಾನೆ.

**ಅಡಿ ಟಿಪ್ಪಣಿಗಳು**

೧. ಡಾ. ಹಿರೇಮಠ.ಬಿ.ಆರ್., (ಸಂ) ಸಂಕೀರ್ಣ ವಚನ ಸಂಪುಟ-೩, ವ-೨೦೯, ಪು-೮೪

೨. ಅದೇ, ವ-೨೦೫, ಪು-೮೨

೩. ಅದೇ, ವ-೨೧೦, ಪು-೮೪

೪. ಅದೇ, ವ-೨೨೨, ಪು-೯೦

೫. ಅದೇ, ವ-೨೦೬, ಪು-೮೩

೬. ಅದೇ, ವ-೨೨೬, ಪು-೯೨

೭. ಅದೇ, ವ–೨೨೮, ಪು–೯೩

೮. ಅದೇ, ವ–೨೦೪, ಪು–೮೨

೯. ಅದೇ, ವ–೨೧೧, ಪು–೮೫

೧೦. ಅದೇ, ವ–೨೧೧, ಪು–೮೫

೧೧. ಅದೇ, ವ–೨೧೪, ಪು–೮೬

೧೨. ಅದೇ, ವ–೨೨೪, ಪು–೯೧

೧೩. ಅದೇ, ವ–೨೦೨, ಪು–೮೧

## ಅಧ್ಯಾಯ : ಐದು

# ಸಮರೋಪ

ವೃತ್ತಿ ಮೂಲದಿಂದ ಬಂದ ಬಾಚಿಕಾಯಕದ ಬಸವಯ್ಯನ ಅಭಿವ್ಯಕ್ತಿಯ ಮುಖಗಳನ್ನು ವಿವಿಧ ಆಯಾಮಗಳಲ್ಲಿ ಪರಿಚಯಿಸಿಕೊಳ್ಳಲಾಗಿದೆ. ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಹಾಗೂ ವಿಶ್ವಕರ್ಮ ಸಮುದಾಯಿಕ ಪರಂಪರಾನುಗತವಾಗಿ ಬಂದ ವೃತ್ತಿ ಮೂಲದ ವೈಶಿಷ್ಟ್ಯದ ಜೀವನವನ್ನು ವಿವಿಧ ಅನುಭವಗಳನ್ನು ವಚನಗಳ ತಾತ್ವಿಕತೆಯನ್ನು ಹಾಗೂ ಬಸವಯ್ಯನ ತತ್ವ ಮೀಮಾಂಸೆಯನ್ನು ಪರಿಚಯಿಸಿಕೊಳ್ಳಲಾಗಿದೆ

ಬಡಿಗತನದ ವೃತ್ತಿಯನ್ನು ತನ್ನ ಜೀವನಕ್ಕಾಗಿ ಕಸುಬನ್ನಾಗಿ ಮಾಡಿಕೊಂಡಿದ್ದನು. ಪ್ರವೃತ್ತಿಯಲ್ಲಿ ಸಾಮಾಜಿಕ ಜೀವನದ ಏಳಿಗೆಗಾಗಿ ಶ್ರಮಿಸಿದನು. ಉಳಿದ ವೃತ್ತಿಧರ್ಮದವರಿಗಿಂತಲೂ ಬಾಚಿಕಾಯಕದ ಬಸವಯ್ಯನ ತಾತ್ವಿಕತೆ ಹಾಗೂ ವೈಶಿಷ್ಟ್ಯತೆಯನ್ನು ಬೇರೆ ರೀತಿಯಲ್ಲಿ ಕಾಣಬಹುದು. ಈತನ ವಚನಗಳ ತಾತ್ವಿಕತೆ ಮಾನವೀಯ ನೆಲೆಯಲ್ಲಿ ಹೆಪ್ಪುಗಟ್ಟಿವೆ. ಆದರೂ ಜಾತಿಯ ಸಂಘರ್ಷ ಹಾಗೂ ಶೋಷಣೆ ಮುಂತಾದ ವೈಚಾರಿಕ ನಿಲುವುಗಳು ಸಮಾಜದ ನಡುವೆ ತುಂಬಿತುಳುಕುತ್ತಿವೆ. ಅಂತಹ ವಿಚಾರಧಾರೆಗಳನ್ನು ಖಂಡಿಸುತ್ತಾರೆ.

ಶೋಷಣೆಗೆ ಒಳಗಾದ ದಲಿತ ದಮನಿತ ಸಾಮಾನ್ಯ ಜನರು ಮುಂತಾದ ವರ್ಗದವರು ತುಳಿಯುವ ಬೌದ್ಧಿಕ ವರ್ಗ ನಿರಂಕುಶ ಪ್ರಭುತ್ವ ರಾಜ್ಯಧಾಹಿಗಳ ನೀತಿ ತತ್ವಗಳನ್ನು ಖಂಡಿಸುತ್ತಾನೆ. ಲೌಖಿಕ ಜಗತ್ತಿನ ಪರಿಭಾಷೆಗಳ ಸೂಕ್ಷ್ಮತೆಯನ್ನು ಮತ್ತು ಪ್ರಾಣಿ, ಪಕ್ಷಿ, ಲೋಹ ಇವು ದುಡಿಯುವ ವರ್ಗದ ಹಾಗೂ ಉದ್ಯೋಗದ ರೂಪಕಗಳು ಆದರೆ ಇವು ಶ್ರಮಿಕ ವರ್ಗದ ಮುಖ್ಯ ನೆಲೆಗಳಾಗಿ ಬಾಚಿಕಾಯಕದ ಬಸವಯ್ಯನ ದಾರ್ಶನಿಕತೆಯ ಸಂವೇದನೆಗಳನ್ನು ವಚನಗಳ ಮೂಲಕ ತಿಳಿದುಕೊಳ್ಳಲಾಗಿದೆ.

ಬದುಕಿನ ವಾಸ್ತವತೆಯ ಪ್ರಜ್ಞೆಯನ್ನು ಸಂಕೀರ್ಣವಾಗಿ ಆತ್ಮಬಲದ ಮೂಲಕ ಶೋಧಿಸುತ್ತಾನೆ ಒಂದು ಸಮಾಜವು ಕೌಟುಂಬಿಕ ನೆಲೆಯಲ್ಲಿ ಆಗುವ ಅನೈತಿಕ ಸಂಗತಿಗಳನ್ನು ಈತನ ವಚನಗಳು ಪ್ರತಿಭಟಿಸುತ್ತವೆ.

ಮುಖ್ಯವಾಗಿ ಮನುಷ್ಯನು ಸಂಘಜೀವಿ ಆದರೆ ಅವನಿಗೆ ಮುಖ್ಯವಾಗಿ ಬೇಕಾದದು ಆತ್ಮಶಾಂತಿ. ಈ ವಿಕಾಸದೆಡೆ ಆತನ ತುಡಿತ ಇದೆ. ಆದರೆ ಮಾನವರೆಲ್ಲರೂ ಆಸೆ, ಆಕಾಂಕ್ಷೆಯುಳ್ಳವರು. ಇವುಗಳನ್ನು ಅರಿತು ಅಂತರಂಗ ಮತ್ತು ಬಹಿರಂಗಗಳ ಆತ್ಮಶೋಧನೆ ಇಲ್ಲಿ ಅತಿ ಮುಖ್ಯವಾಗುತ್ತದೆ. ದೇಹ, ಮನಸ್ಸು ಹಾಗೂ ಆಧ್ಯಾತ್ಮಿಕ ಜ್ಞಾನದ ಆತ್ಮಪರಿಶುದ್ಧಿಯ ಪ್ರಜ್ಞೆಯನ್ನು ಬಾಚಿಕಾಯಕದ ಬಸವಯ್ಯ ತಿಳಿಸಿಕೊಡುತ್ತಾನೆ.

ರೂಪ ಮತ್ತು ನಿರೂಪ ಎಂಬ ರೂಪಕಗಳು ಪರಿಕಲ್ಪನೆಗಳನ್ನು ಇಟ್ಟುಕೊಂಡು ವಾಸ್ತವ ಸ್ಥಿತಿಗತಿಯ ನೆಲೆಯಲ್ಲಿ ಸಮಾಜದ ಚಿತ್ರಣ ಮಾಡುತ್ತಾನೆ.

ಲೌಕಿಕ ಮತ್ತು ಅಲೌಕಿಕದ ಜೀವನದ ಪರಿಕಲ್ಪನೆಗಳನ್ನು ಅರಿತು ಲೌಕಿಕವಾಗಿ ಹುಡುಕುವ ಹಾಗೂ ಖಂಡಿಸುವ ಮತ್ತು ಸಂವೇದನೆಗಳನ್ನು ವ್ಯಕ್ತಪಡಿಸುವ ಅನುಭಾವಿಯಾಗಿದ್ದರು. ವೃತ್ತಿ ಜೀವನದಲ್ಲಿ ಬಡಿಗತನ ಕಾಯಕದವನಾಗಿದ್ದು ರೈತರಿಗೆ ಬೇಕಾದ ರಂಟೆ, ಕುಂಟೆ ಇವುಗಳಿಗೆ ಉಗುಲು ಹೊಡೆಯುವ ಅಥವಾ ಹೋಲು ಮಾಡುವ ಪರಿಕರಗಳಾದ ಉಳಿ, ಬಾಚಿ, ಕೊಡತಿ, ಏಣು, ಕಂಬ, ಚೌಷಪ್ಪಿ, ಬೋದಿಗೆ, ಮಡಿಗೆ, ಕಂಬ ಇವು ಆತನ ವೃತ್ತಿ ಜೀವನದ ಸರಂಜಾಮುಗಳು, ಇಂತಹ ಪರಿಕರಗಳೇ ಆತನ ಜೀವನದ ಆಧಾರ ಸ್ತಂಭಗಳು. ಈ ಜೀವನದ ವೃತ್ತಿಯಲ್ಲಿಯೂ ಪೂಜೆ, ನಿಯಮ, ವ್ರತ ಆಚರಣೆ ಇವೆಲ್ಲವುಗಳಿಗಿಂತ ತನ್ನ ವೃತ್ತಿ ಧರ್ಮವೇ, ಕರ್ತವ್ಯ ಎಂಬ ಮನೋಧೋರಣೆಯನ್ನು ಸಾರುತ್ತದೆ.

ಬಾಚಿಕಾಯಕದ ಬಸವಯ್ಯನ ವೃತ್ತಿಧರ್ಮದೊಂದಿಗೆ ಇತರ ವಚನಕಾರರ ವೃತ್ತಿಧರ್ಮವನ್ನು ತಾತ್ವಿಕತೆಯಲ್ಲಿ ಈ ಅಧ್ಯಯನದ ಮೂಲಕ ವಿವಿಧ ವೈಶಿಷ್ಟತೆಯ ಪರಂಪರೆಯನ್ನು ಸಮಾಜಿಕ ನಿಯಮಾವಳಿಗಳನ್ನು ಮತ್ತು ಧಾರ್ಮಿಕತೆಯನ್ನು ಹಾಗೂ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಜಂಗಮೋಪಾದಿಯಲ್ಲಿ ಕರ್ತವ್ಯ ನಿಷ್ಠೆ ಪ್ರಜ್ಞೆಯನ್ನು ಅರಿತುಕೊಳ್ಳಲಾಗಿದೆ. ಈ ಎಲ್ಲಾ ವಚನಕಾರರ ಸಮಾಜದ ಮೇಲು ಕೀಳು ತಾರತಮ್ಯ ಭಾವನೆಗಳನ್ನು ಅಳಿಸಿಹಾಕಿ ಸಮಾಜದ ಉದ್ಧಾರಕ್ಕಾಗಿ ಜಾತ್ಯಾತೀತ ಹೊಂದಾಣಿಕೆಯ ಮೂಲಕ ಎಲ್ಲರನ್ನು ಒಂದುಗೂಡಿಸಲು ಹಂಬಲಿಸಿದರು.

ವೇದ ಆಗಮ ಉಪನಿಷತ್ತುಗಳಿಗಿಂತ ವೃತ್ತಿಧರ್ಮವೇ ಜೀವನದ ಆಧಾರ ಸ್ತಂಭ. ಇದನ್ನರಿತು ಬಾಳಬೇಕು.

ಜನರ ಏಳಿಗೆಗಾಗಿ ದುಡಿದ ಬಾಚಿಕಾಯಕದ ಬಸವಯ್ಯ ತನ್ನ ಬಡಗಿತನದ ವೃತ್ತಿಯಿಂದ ಬಂದ ಸಂಪಾದನೆಯನ್ನು ಜನರ ಸೇವೆಗಾಗಿಯೇ ದಾಸೋಹ ಮಾಡುತ್ತಿದ್ದನು. ಇಂತಹ ಸೇವಾ ಭಾವನೆಯ ವೈಶಿಷ್ಠತೆಯನ್ನು ಅರಿತುಕೊಳ್ಳಲಾಗಿದೆ. ಒಬ್ಬ ಆದರ್ಶ ವ್ಯಕ್ತಿಯಾಗಿ ನೋವುನಲಿವುಗಳನ್ನು ವಚನಗಳ ಮೂಲಕ ಹಂಚಿಕೊಳ್ಳುವ ಇನ್ನೊಬ್ಬರ ನೋವು ನಲಿವುಗಳಿಗೆ

ಸಹಾಯ ಸಹಕಾರವನ್ನು ನೀಡುವ ಪ್ರೀತಿ ವಿಶ್ವಾಸದ ಸಂದೇಶವನ್ನು ಈತನ ವಚನಗಳು ಸಾರುತ್ತವೆ.

ಯಾವುದೇ ರೋಷವಿಲ್ಲದೆ ಆತ್ಮ ವಿಶ್ವಾಸದ ಮೂಲಕ ಎಲ್ಲರನ್ನು ಒಂದುಗೂಡಿಸುವ ಸಂಯಮವನ್ನು ಕಾಯಕ ಎಂಬ ನಿಯಮದ ಮೂಲಕ ಉಳಿ, ಬಾಚಿ, ಪರಿಭಾಷೆಗಳ ಅರಿವಿನೆಡೆಯಲ್ಲಿ ಈತನ ವಚನಗಳು ವಾಸ್ತವದ ನೆಲೆಯತ್ತ ನಮ್ಮನ್ನು ಕೊಂಡೊಯ್ಯುತ್ತವೆ.

ವೃತ್ತಿಕಾಯಕ ಮಾಡುವವರು ದೈವ ಸ್ವರೂಪವುಳ್ಳವರು ಯಾವುದೇ ಜಾತಿ ಕುಲ ಗೋತ್ರಗಳನ್ನು ಮೋಸ ವಂಚನೆಗಳನ್ನು ತಾರತಮ್ಯ ಭಾವನೆಗಳ ಪರಿವೆ ಇವರಿಗಿರುವುದಿಲ್ಲ ಆದರೆ ವ್ಯಕ್ತಿಯ ವೈಶಿಷ್ಟ್ಯತೆಯನ್ನು ಮನುಷ್ಯತ್ವದ ಗುಣಗಳನ್ನು ಭಿತ್ತರಿಸುತ್ತವೆ.

ತಮ್ಮ ಜೀವನದ ವೈವಿಧ್ಯ ಅನುಭವಗಳನ್ನು ಮುಕ್ತವಾಗಿ ಅಭಿವ್ಯಕ್ತಿ ಪಡಿಸುವ ಶಾಂತಿದಾಯಕ ನಿಲುವುಳ್ಳವರು. ಕಾಯಕದಲ್ಲಿ ನಿರತನಾಗದವನಿಗೆ ಯಾವುದೇ ಚಂಚಲತೆಗೆ ಅವಕಾಶವಿರುವುದಿಲ್ಲ. ಇವನು ಸಮಾಜ ಜೀವಿಯಾಗಿ ನಿಸರ್ಗ ಜೀವಿಯಾಗಿ ದುರಾಲೋಚನೆಗೆ ಒಳಗಾಗದೆ. ಅರ್ಥ, ಕಾಮ, ಮೋಕ್ಷ ಎಂಬ ಅರಿವುಳ್ಳವನು.

ಇವುಗಳ ಪರಿಕಲ್ಪನೆ ಅರಿತವನು ನಿಜವಾದ ಶರಣನಾಗಿ ಧೈವ ಸಂಭೂತನಾಗಿ ಸಮಾಜದ ಏಳಿಗೆಗಾಗಿ ಶ್ರಮಿಸುತ್ತಾನೆ. ಅದಕ್ಕೆ ಪ್ರಮುಖ ಕಾರಣ. ಬಾಚಿಕಾಯಕದ ಬಸವಯ್ಯನ ವೃತ್ತಿ ಕಲೆ ಇಲ್ಲಿ ಪ್ರಧಾನವಾಗಿ ಕಾಣಿಸಿಕೊಳ್ಳುತ್ತದೆ.

ಈ ಕಸುಬಿನ ಮೂಲಕ ವಿವಿಧತೆಯಲ್ಲಿ ಏಕತೆಯನ್ನು ಕಾಣುವ ತಾತ್ವಿಕ ಮನೋಪ್ರವೃತ್ತಿವುಳ್ಳವನಾಗಿದ್ದನು. ತನ್ನ ಜೀವನದ ವಿಕಾಸಕ್ಕಾಗಿ ಬಾಚಿಕಾಯಕದ ವೃತ್ತಿ ಮಾಡುತ್ತಿದ್ದು ದೇಹವೇ ದೇವಾಲಯವೆಂದು ಅರಿತು ಬಾಚಿಕಾಯಕದ ಬಸವಯ್ಯ ಉಳಿ, ಕೊಡತಿ ಇವುಗಳ ಆ ದೇವಾಲಯದ ಇಷ್ಟಲಿಂಗ ದೈವಗಳಿದ್ದಂತೆ ಎಂಬ ಸೂಕ್ಷ್ಮತೆಯನ್ನು ಈತನ ತಾತ್ವಿಕ ಮೀಮಾಂಸೆಯನ್ನು ಈ ವಚನ ಮೂಲಕ ಅರಿತುಕೊಳ್ಳಲಾಗಿದೆ.

ಬಾಚಿಕಾಯಕದ ಬಸವಯ್ಯನ ಮುಖ್ಯ ಧರ್ಮ ವಿಶ್ವಕರ್ಮದ ಸಿದ್ಧಾಂತದಲ್ಲಿ ಬೆಳೆದವನು ಹಾಗೂ ಅನುಭಾವಿ ಶರಣನಾಗಿ ಮುಖ್ಯ ಕಾಯಕ ವೃತ್ತಿಧರ್ಮದವನಾಗಿ ಜೀವನದ ವೈವಿಧ್ಯತೆಯ ದೀಪದ ಪ್ರಣಿತಿಯಂತೆ ಪ್ರಜ್ವಲಿಸುವ ಹಾಗೂ ಪಂಕ್ತಿಯ ಸಾಲುಗಳನ್ನು ದೀಪವನ್ನು ಬೆಳಗುವ ಆ ಬೆಳಕಿನ ವೈಚಾರಿಕ ಸೂಕ್ಷ್ಮ ತಿಳುವಳಿಕೆಯನ್ನು ಇತನ ವಚನಗಳ ತಾತ್ವಿಕ ಸ್ವರೂಪದ ನೆಲೆಯಲ್ಲಿ ನೋಡಲಾಗಿದೆ.

# ಪರಾಮರ್ಶನ ಗ್ರಂಥಗಳು

೧. ಕಲಬುರ್ಗಿ ಎಂ.ಎಂ.,(ಸಂ), ೧೯೮೫, ಶಿವಶರಣರ ಕಾಯಕ, ಸಿದ್ಧಾಂತ ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೨. ಗಿರಡ್ಡಿ ಗೋವಿಂದರಾಜ, ೧೯೮೫, ವಚನ ವಿನ್ಯಾಸ, ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ)

೩. ಜವರಯ್ಯ ಮ.ನ., ೧೯೯೩, ದಲಿತವರ್ಗದ ಶರಣರು ಮತ್ತು ಶರಣೆಯರು ಒಂದು ಅಧ್ಯಯನ, ಸಿದ್ಧಾರ್ಥ ಗ್ರಂಥಮಾಲೆ, ನಂ.೯–೮೨ ಮೊದಲನೆ ಹಂತ, ಕುವೆಂಪು ನಗರ, ಮೈಸೂರು

೪. ತಿಪ್ಪೇರುದ್ರಸ್ವಾಮಿ ಹೆ.ಣ., ೧೯೮೩ ವಚನಗಳಲ್ಲಿ ವೀರಶೈವ ಧರ್ಮ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಕೃಷ್ಣಮೂರ್ತಿ ಪುರಂ, ಮೈಸೂರು–೪

೫. ನಾಗರಾಜ ಡಿ.ಆರ್., ೧೯೯೯, ಅಲ್ಲಮ ಪ್ರಭು ಮತ್ತು ಶೈವ ಪ್ರತಿಭೆ, ಅಕ್ಷರ ಪ್ರಕಾಶನ ಹೆಗ್ಗೋಡು (ಸಾಗರ)

೬. ನಾರಾಯಣ ಪಿ.ವಿ., ೧೯೮೨ ವಚನ ವ್ಯಾಸಂಗ, ಭಾಗ್ಯಲಕ್ಷ್ಮೀ ಪ್ರಕಾಶನ, ೫೨೪ ಶ್ರೀನಗರ ಮುಖ್ಯ ರಸ್ತೆ, ಬನಶಂಕರಿ ಮೊದಲ ಹಂತ, ಬೆಂಗಳೂರು

೭. ವಿದ್ಯಾಶಂಕರ ಎಸ್.,(ಸಂ), ೧೯೯೩, ಸಿದ್ಧರಾಮೇಶ್ವರ ವಚನ ಸಂಪುಟ–೪, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೮. ವೀರಣ್ಣ .ಸಿ., ೧೯೮೬, ಹನ್ನೆರಡನೇ ಶತಮಾನದ ಕಾಯಕ ಜೀವಿಗಳ ಚಳುವಳಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು

೯. ಡಾ. ವೀರೇಶ ಬಡಿಗೇರ ೨೦೦೭, ಬಾಚಿಕಾಯಕದ ಬಸವಯ್ಯ ವೃತ್ತಿ ಹಾಗೂ ತತ್ತ್ವ ಮೀಮಾಂಸೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೦. ಶ್ರೀನಿವಾಸ ಮೂರ್ತಿ ಎಮ್.ಆರ್., ೧೯೪೬, ವಚನ ಧರ್ಮಸಾರ, ಮೈಸೂರು ವಿಶ್ವವಿದ್ಯಾಲಯ ಮೈಸೂರು.

೧೧. ಸುಂಕಾಪುರ ಎಂ.ಎಸ್.,(ಸಂ) ೧೯೭೮, ಸಕಲ ಪುರಾತನದ ವಚನಗಳು, ಸಂ-೩ ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೨. ಸುಂಕಾಪುರ ಎಂ.ಎಸ್.,(ಸಂ) ೧೯೭೮, ಸಕಲ ಪುರಾತನದ ಬೆಡಗಿನ ವಚನಗಳು, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೩. ಹಿರೇಮಠ ಬಿ.ಆರ್., ೧೯೯೩, ಸಂಕೀರ್ಣ ವಚನ ಸಂಪುಟ-೩, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೧೪. ಹಿರೇಮಠ ಬಿ.ಆರ್., ೧೯೯೩ ಸಂಕೀರ್ಣ ವಚನ ಸಂಪುಟ-೪, ಕರ್ನಾಟಕ ಸರಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

